KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜುಲೈ ೨, ೨೦೦೯ (ಆಷಾಢ ೧೧, ಶಕ ವರ್ಷ ೧೯೩೧) | ಸಂಚಿಕೆ ೨೭ |
|---|---|---|

## ಭಾಗ-೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ-15/08-09, ದಿನಾಂಕ:7ನೇ ಮಾರ್ಚ್, 2009**

**ಉಪಸ್ಥಿತರು :** ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾಧಿದಾರರು :** ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ.
(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು :** (1) ದಾದಾಪೀರ್ (2) ಸೈಪು

**ಬಾಧ್ಯತೆದಾರರು :** ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿನಾಂಕ:06-08-2008ರಂದು ಆನಂದಪುರಂ ವಲಯದ ಚೋರಡಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಶಿವಮೊಗ್ಗ ತಾಲ್ಲೂಕು ಕುಂಸಿ ಹೋಬಳಿ ಚೋರಡಿ ಗ್ರಾಮದ ಚೋರಡಿ ಕಿರು ಅರಣ್ಯದ ಸ.ನಂ: 117ರ ಎನ್‌ಹೆಚ್. 206 ರಸ್ತೆಯಲ್ಲಿ ಗಸ್ತು ಮಾಡುತ್ತಾ ಬರುವಾಗ ಒಂದು ಬೈಕಿನಲ್ಲಿ ಸಾಗುವಾನಿ ತುಂಡುಗಳಿಟ್ಟುಕೊಂಡು ಬರುತ್ತಿರುವುದನ್ನು ನಿಲ್ಲಿಸಿದಾಗ ನಾಟಾವನ್ನು ಹಿಡಿದು ಕುಳಿತಿದ್ದ ಅಸಾಮಿ ಓಡಿಹೋದನು. ಓಡಿಹೋದವನು ಸೈಪು ಬಿನ್ ಮುಜೀಬ್, 21 ವರ್ಷ, ಚೋರಡಿ ವಾಸಿ ಎಂದು ಶ್ರೀ ಎ.ವಿ. ಶ್ರೀಧರ, ಅರಣ್ಯ ರಕ್ಷಕರು ಗುರುತಿಸಿದರು. ಬೈಕನ್ನು ಓಡಿಸುತ್ತಿದ್ದ ಅಸಾಮಿ ದಾದಾಪೀರ್ ಬಿನ್ ಹಮೀದ್ ಸಾಬ್, ಅಂದಾಜು 26 ವರ್ಷ, ಚೋರಡಿ ವಾಸಿ ಇವನನ್ನು ವಶಕ್ಕೆ ತೆಗೆದುಕೊಂಡು ವಿಚಾರಿಸಿದಾಗ ಆತನು ಸಾಗುವಾನಿ ಮರ ಕಡಿದು ತುಂಡುಗಳನ್ನಾಗಿ ಪರಿವರ್ತಿಸಿದ್ದು, ಅಕ್ರಮವಾಗಿ ಸಾಗಿಸಿದ್ದು ಒಪ್ಪಿಕೊಂಡಿರುತ್ತಾನೆ. ವಾಹನದಲ್ಲಿ 3 ಸಾಗುವಾನಿ ತುಂಡುಗಳಿದ್ದು, ಅವುಗಳ ತುದಿ, ಬುಡದಲ್ಲಿ ಇಲಾಖೆಯ ಯಾವುದೇ ಛಾಪಾದ ಗುರುತಿರುವುದಿಲ್ಲ. ಇದನ್ನು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತುವರದಿಯೊಂದಿಗೆ ಸಾಗುವಾನಿ ನಾಟಾಕ್ಕೆ ನಂಬರ್ ಕೊಟ್ಟು, ಅಳತೆ ಮಾಡಿ 3=0.139ಎಂ3 ಇದ್ದು, ಅಸಾಮಿಯನ್ನು ಮತ್ತು ವಾಹನ ಸುಜುಕಿ ಬೈಕ್ ಕೆಎ-14-ಇ-8984ನ್ನು (ಇಂಜಿನ್ ನಂಬರ್ 7211-M-359713, ಛಾಸ್ಸಿಸ್ ನಂ: 7211-F-3.44296) ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 33, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಆನಂದಪುರಂ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 32/08-09ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ

ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ: 22–11–2008ರಂದು ಆದೇಶವಾಗಿದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸುವಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ:ಬಿ3:ಅಮೊ:ವಾಹನ–15/08–09 ದಿ:08–09–2008ರಂದು ಪತ್ರ ಬರೆದು ಕೋರಲಾಯಿತು. ದಿ: 30–10–2008ರಂದು ಜ್ಞಾಪನಾ ಪತ್ರದ ಮೂಲಕ ಪುನಃ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಲಾಯಿತು. ಆದರೆ ಅವರಿಂದ ಇಲ್ಲಿಯವರೆವಿಗೂ ಯಾವುದೇ ಮಾಹಿತಿ ಈ ನ್ಯಾಯಾಲಯಕ್ಕೆ ಬಂದಿರುವುದಿಲ್ಲ. ಮುಂದೆ ಸದರಿ ವಾಹನದ ಬಗ್ಗೆ ಆರ್.ಸಿ. ಮಾಲೀಕರು ನ್ಯಾಯಾಲಯಕ್ಕೆ ಮೊರೆಹೋದಲ್ಲಿ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರೇ ನೇರ ಹೊಣೆಗಾರರಾಗಿರುತ್ತಾರೆ.

ಈ ನಡುವೆ ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ 30 ದಿನಗಳ ಕಾಲಾವಕಾಶ ನೀಡಿ ವಾಹನದ ದಾಖಲೆಗಳನ್ನು ಒದಗಿಸುವಂತೆ ಅಧಿಸೂಚನೆ ಸಂಖ್ಯೆ: ಬಿ3:ಅಮೊ:ವಾಹನ–09/08–09 ದಿ: 08–09–2008ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆ ಮತ್ತು ಗೆಜೆಟ್‌ನಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಿಕೊಡಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ: 18–09–08ರಂದು ಗೆಜೆಟ್ ಪತ್ರಿಕೆಯಲ್ಲಿ ಮತ್ತು ದಿ: 27–10–2008ರಂದು ಉದಯವಾಣಿ ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ: 07–03–2009ರಂದು ವಾದ ಮಂಡಿಸಿ ಈ ವಾಹನದಲ್ಲಿ ಸಾಗುವಾನಿ ನಾಟಾಗಳನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಸಾಗುವಾನಿ ನಾಟಾಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಈ ವಾಹನದ ಬಗ್ಗೆ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿ 30 ದಿನಗಳಿಗಿಂತಲೂ ಹೆಚ್ಚು ಕಾಲವಾಗಿದ್ದರೂ ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಯಾರೂ ಈ ನ್ಯಾಯಾಲಯಕ್ಕೆ ಕ್ಲೈಮು ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ, ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಂಡು, ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಜಪ್ತಿಮಾಡಿದ ವಾಹನ ಸುಜುಕಿ ಬೈಕ್ ಕೆಎ–14–ಇ–8984ನ್ನು (ಇಂಜಿನ್ ನಂಬರ್ 7211-M-359713, ಛಾಸ್ಸಿಸ್ ನಂ:7211-F-3.44296) ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಸಾಗುವಾನಿ ನಾಟಾ 03=0.137ಎಂ3 ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ ವಾಹನ ಸುಜುಕಿ ಬೈಕ್ ಕೆಎ–14–ಇ–8984ನ್ನು (ಇಂಜಿನ್ ನಂಬರ್ 7211-M-359713, ಛಾಸ್ಸಿಸ್ ನಂ:7211-F-3.44296) ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ನಾಟಾ 03=0.137ಎಂ3 ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 07–03–2009ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

ಪಿ.ಆರ್.337

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–07/08–09, ದಿನಾಂಕ:7ನೇ ಮಾರ್ಚ್, 2009**

**ಉಪಸ್ಥಿತರು :** ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು :** ಪೋಲಿಸ್ ಸಬ್ ಇನ್ಸ್‌ಪೆಕ್ಟರ್, ಗ್ರಾಮಾಂತರ ಪೋಲಿಸ್ ಠಾಣೆ, ಸಾಗರ
(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು :** (1) ನಿಸಾರ್ (2) ಸೀತಾರಾಮ್ (3) ಪುರುಷೋತ್ತಮ (4) ಶೇಖರ್ (5) ಕುಮಾರ್
(6) ಉಮೇಶ (7) ರಾಜು

**ಬಾಧ್ಯತೆದಾರರು :** ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:**

ದಿನಾಂಕ:15–05–2005ರಂದು ಸಂಜೆ 6–00 ಗಂಟೆಗೆ ಸರ್ಕಲ್ ಪೋಲಿಸ್ ಇನ್ಸ್‌ಪೆಕ್ಟರ್, ಸಾಗರ ಗ್ರಾಮಾಂತರ ವೃತ್ತ ಇವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಚೆನ್ನಶೆಟ್ಟಿಕೊಪ್ಪದ ರೈಲ್ವೆ ಗೇಟ್ ಹತ್ತಿರ ಕಾಯುತ್ತಿರುವಾಗ ಕೆಎ–17–ಎಂ–6978 ಬಿಳಿ ಟ್ರಾಕ್ಸ್ ವಾಹನವು ಬಂದಿದ್ದು, ಅದನ್ನು ತಡೆದು ನಿಲ್ಲಿಸಿದಾಗ ನಿಸಾರ್ ಅಹಮದ್ ಮತ್ತು ಸೀತಾರಾಮ್ ಎಂಬುವವರನ್ನು ಹಿಡಿದುಕೊಂಡಿದ್ದು, ವಾಹನದಲ್ಲಿದ್ದ ಇತರೆ ಅಸಾಮಿಗಳು ಓಡಿಹೋಗಿದ್ದು, ವಾಹನವನ್ನು ತಪಾಸಣೆ ಮಾಡಿದಾಗ ಅದರಲ್ಲಿ ಯಾವುದೇ ಪರವಾನಿಗೆ ಇಲ್ಲದ ಬೀಟೆ ತುಂಡು ಇದ್ದು, ಇದು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62 ಮತ್ತು ಕರ್ನಾಟಕ ಅರಣ್ಯ ಕಾನೂನು ಉಪನಿಯಮ 1969 ಹಾಗೂ ಐಪಿಸಿ ಕಲಂ 379ರ ಪ್ರಕಾರ ಸಾಗರ ಗ್ರಾಮಾಂತರ ಠಾಣೆ ಗುನ್ನೆ ನಂ: 126/05ನ್ನು ದಾಖಲಿಸಿರುತ್ತದೆ. ನಂತರ ತನಿಖೆ ಮಾಡಿದಾಗ ಈ ಕೇಸಿನ ಆರೋಪಿಗಳು ಕೃತ್ಯಕ್ಕೆ ಉಪಯೋಗಿಸಿದ ಒಂದು ಬಿಳಿ ಬಣ್ಣದ ಮಾರುತಿ ವ್ಯಾನ್ ನಂ: ಎಂಹೆಚ್–02–ಜೆ–4259 ಮತ್ತು ಮಾರುತಿ ಎಸ್ಟೀಮ್ ನಂ: ಕೆಎ–21–ಎಂ–5291ನ್ನು ಆರೋಪಿ ತಮ್ಮ ಸ್ವ ಇಚ್ಛಾ ಹೇಳಿಕೆಯ ಮೂಲಕ ದಿ:15–05–2005ರಂದು ಪಂಚರ ಸಮಕ್ಷಮ ವಶಪಡಿಸಿಕೊಂಡು ಪಿಎಫ್ ನಂ: 105/05ರಲ್ಲಿ ನೊಂದಾಯಿಸಿಕೊಂಡು ಠಾಣಾ ಆವರಣದಲ್ಲಿ ಇರಿಸಲಾಗಿದ್ದು, ಈಗ ಸದರಿ ವಾಹನಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಲಯರವರಿಗೆ ವರ್ಗಾವಣೆ ಕೊಡುವಂತೆ ಜೆ.ಎಂ.ಎಫ್.ಸಿ., ಸಾಗರ ನ್ಯಾಯಾಲಯವು ದಿ: 16–06–2008ರಂದು ಆದೇಶಿಸಿದಂತೆ ಸಬ್ ಇನ್ಸ್‌ಪೆಕ್ಟರ್ ಆಫ್ ಪೋಲಿಸ್, ಗ್ರಾಮಾಂತರ ಠಾಣೆಯ ಪತ್ರ ಸಂಖ್ಯೆ: ಇ2:ಪಿಎಸ್:ಸಿಸಿ–2008 ದಿ: 20–06–2008ರ ಪತ್ರದಲ್ಲಿ ದಿ: 22–06–2008ರಂದು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ:03–07–2008ರಂದು ಆದೇಶವಾಗಿರುತ್ತದೆ.

ಜಪ್ತಾದ 2 ವಾಹನಗಳಲ್ಲಿ ಎಂಹೆಚ್–02–ಜೆ–4259ರ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದ ಪತ್ರ ಸಂಖ್ಯೆ: B3:FOC:VEH-07/08-09 ದಿನಾಂಕ:16–10–2008ರಂದು ದಿ ಡೈರೆಕ್ಟರ್ ಆಫ್ ಟ್ರಾನ್ಸ್‌ಪೋರ್ಟ್, ಮುಂಬೈ ಮತ್ತೊಂದು ವಾಹನ ಕೆಎ–21–ಎಂ–5291ರ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಬಿ3:ಅಮೊ:ವಾಹನ–07/08–09 ದಿ: 16–10–2008ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಪುತ್ತೂರು ರವರಿಗೂ ಪತ್ರ ಬರೆದು ಕೋರಲಾಯಿತು. ದಿ ಡೈರೆಕ್ಟರ್ ಆಫ್ ಟ್ರಾನ್ಸ್‌ಪೋರ್ಟ್, ಮುಂಬೈ ರವರು ಇಲ್ಲಿಯವರೆವಿಗೂ ಈ ವಾಹನದ ಬಿ ಪ್ರತಿಯನ್ನು ಒದಗಿಸಿರುವುದಿಲ್ಲ. ಕೆಎ–21–ಎಂ–5291ರ ಬಿ ಪ್ರತಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿ, ಪುತ್ತೂರು ರವರು ದಿನಾಂಕ:25–10–2008 ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ ಹಾಗೂ ಸದರಿ ವಾಹನದ ಸಿ.ಸಿ.ಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿ, ಉಡುಪಿಗೆ ದಿ: 16–09–2004ರಂದು ವರ್ಗಾಯಿಸಿದ ಬಗ್ಗೆ ನಮೂದಿಸಿರುತ್ತಾರೆ. ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಉಡುಪಿಯವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–07/08–09 ದಿ: 04–12–2008ರಂದು ಪತ್ರ ಬರೆದು ಬಿ ಪ್ರತಿ ಒದಗಿಸಲು ಕೋರಿದೆ. ಇಲ್ಲಿಯವರೆವಿಗೂ ಉಡುಪಿ ಪ್ರಾದೇಶಿಕ ಸಾರಿಗೆ ಅಧಿಕಾರಿಯು ಈ ನ್ಯಾಯಾಲಯಕ್ಕೆ ಬಿ ಪ್ರತಿ ಒದಗಿಸಿರುವುದಿಲ್ಲ.

ಈ ನಡುವೆ ಈ ಎರಡು ವಾಹನಗಳ ಮಾಲಿಕತ್ವದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ 30 ದಿನಗಳ ಕಾಲಾವಕಾಶ ನೀಡಿ ವಾಹನದ ದಾಖಲೆಗಳನ್ನು ಒದಗಿಸುವಂತೆ ಅಧಿಸೂಚನೆ ಸಂಖ್ಯೆ: ಬಿ3:ಅಮೊ:ವಾಹನ–08/08–09 ದಿ: 02–07–2008ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆ ಮತ್ತು ಗೆಜೆಟ್‌ನಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಿಕೊಡಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ: 31–07–08ರಂದು ಗೆಜೆಟ್ ಪತ್ರಿಕೆಯಲ್ಲಿ ಮತ್ತು ದಿ: 19–07–2008ರಂದು ಮಲೆನಾಡು ಮಿತ್ರ ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ

ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಮುಂದಿನ ಕ್ರಮ ಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:07–03–2009ರಂದು ವಾದ ಮಂಡಿಸಿ ಈ ಎರಡು ವಾಹನಗಳನ್ನು ಬೀಟೆ ತುಂಡುಗಳನ್ನು ಅಕ್ರಮವಾಗಿ ಸಾಗಾಣಿಕೆ ಮಾಡಲು ಉಪಯೋಗಿಸಿದ್ದರಿಂದ ಪೋಲಿಸ್ ಸಬ್ ಇನ್ಸ್‌ಪೆಕ್ಟರ್, ಗ್ರಾಮಾಂತರ ಪೋಲಿಸ್ ಠಾಣೆ, ಸಾಗರ ಇವರು ಜಪ್ತುಮಾಡಿ, ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಪತ್ರಿಕಾ ಪ್ರಕಟಣೆ ಹೊರಡಿಸಿದ್ದು, ಪ್ರಕಟಣೆಯು ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳ ಕಾಲವಾದರೂ ಬಾಧ್ಯತೆದಾರರು ಈ ವಾಹನ ಬಿಡಿಸಿಕೊಳ್ಳುವ ಬಗ್ಗೆ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ವಾಹನಗಳನ್ನು ಮತ್ತು ಬೀಟೆ ತುಂಡುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ, ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ಪೋಲಿಸ್ ಸಬ್ ಇನ್ಸ್‌ಪೆಕ್ಟರ್, ಗ್ರಾಮಾಂತರ ಪೋಲಿಸ್ ಠಾಣೆ, ಸಾಗರ ಇವರು ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ಎಂಹೆಚ್–02–ಜೆ–4259 ಮತ್ತು ಮಾರುತಿ ಎಸ್ಟೀಮ್ ಕೆಎ–21–ಎಂ–5291 ನ್ನು ಕರ್ನಾಟಕ ಸರ್ಕಾರದ ಸಂಪತ್ತು ಆದ ಬೀಟೆ ತುಂಡುಗಳನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ ಮಾರುತಿ ವ್ಯಾನ್ ಎಂಹೆಚ್–02–ಜೆ–4259 ಮತ್ತು ಮಾರುತಿ ಎಸ್ಟೀಮ್ ಕೆಎ–21–ಎಂ–5291ನ್ನು ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:07–03–2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಪಿ.ಆರ್.338 ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–23/07–08, ದಿನಾಂಕ:7ನೇ ಫೆಬ್ರವರಿ, 2009**

**ಉಪಸ್ಥಿತರು :** ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಣ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು :** ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ.
(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು :** ಯಾರೂ ಪತ್ತೆಯಾಗಿರುವುದಿಲ್ಲ.

**ಬಾಧ್ಯತೆದಾರರು :** ಯಾರೂ ಹಕ್ಕು ಬಾಧ್ಯತೆ ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:**

ದಿನಾಂಕ:19–01–2008ರಂದು ಆನಂದಪುರಂ ವಲಯದ ಗೌತಮಪುರ ಶಾಖೆಯ ವನಪಾಲಕರ ಮೊಬೈಲ್‌ಗೆ ಶಿಕಾರಿಪುರದಿಂದ ಶಿವಮೊಗ್ಗಕ್ಕೆ ಬೀಟೆ ನಾಟಾಗಳನ್ನು ಟೆಂಪೋ ಟ್ರಾವೆಲ್‌ನಲ್ಲಿ ಸಾಗಾಣಿಕೆ ಮಾಡುತ್ತಾರೆಂದು ಬಂದ ವರ್ತಮಾನದ ಮೇರೆಗೆ ವನಪಾಲಕರು ಮತ್ತು ಸಿಬ್ಬಂದಿಯವರು ಇಲಾಖಾ ಜೀಪು ನಂ.ಕೆಎ–15–ಜಿ–86ರಲ್ಲಿ ಶಿವಮೊಗ್ಗ ತಾಲ್ಲೂಕು ಕುಂಸಿ ಹೋಬಳಿಯ ಶಿಕಾರಿಪುರದಿಂದ ಚೋರಡಿಗೆ ಹೋಗುವ ರಸ್ತೆಯ ದೊಡ್ಡಹಳ್ಳದ ಸೇತುವೆ ಮೇಲೆ ಕಾಯುತ್ತಾ ಶಿಕಾರಿಪುರದಿಂದ ಬರುವ ವಾಹನಗಳನ್ನು ತಪಾಸಣೆ ಮಾಡುತ್ತಿರುವಾಗ ಒಂದು ವಾಹನ ಇಲಾಖೆಯವರಿಂದ ಸ್ವಲ್ಪ ದೂರದಲ್ಲಿ ನಿಲ್ಲಿಸಿ ವಾಹನದಲ್ಲಿದ್ದ 3 ಜನ ಆಸಾಮಿಗಳು ಕೆಳಗಿಳಿದು ಓಡಿಹೋಗಿರುತ್ತಾರೆ. ನಂತರ ವಾಹನವನ್ನು ಪರಿಶೀಲಿಸಲಾಗಿ ವಾಹನದಲ್ಲಿ 3 ಬೀಟೆ ನಾಟಾ ಇದ್ದು, ಈ ತುಂಡುಗಳ ಮೇಲೆ ಇಲಾಖೆಯ ಯಾವುದೇ ಛಾಪಾದ ಗುರುತಿರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಹಾಗೂ ನಾಟಾಗಳಿಗೆ ಕೆಂಪು ಬಣ್ಣದಿಂದ ಕ್ರಮಸಂಖ್ಯೆ ಕೊಟ್ಟು, ನಾಟಾಗಳನ್ನು

ಅಳತೆ ಮಾಡಿದಾಗ 3=0.411ಎಂ3 ಇದ್ದು, ನಾಟಾಗಳಿಗೆ KNFD-G-66-EE ಛಾಪಾದ ಗುರುತು ಹೊಡೆದು ವಾಹನ ನಂ.ಕೆಎ–01–ಎನ್–1687, ಛಾಸ್ಸಿಸ್ ನಂ. TF-804207-H-94 ಇಂಜಿನ್ ನಂ.28036 ಇದ್ದು ವಾಹನ ಮತ್ತು ನಾಟಾವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿ ವರದಿಯೊಂದಿಗೆ ಇಲಾಖಾ ಪರ ಜಪ್ತು ಮಾಡಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಆನಂದಪುರಂ ವಲಯದ ಅ.ಮೊ.ಸಂ. 108/07–08ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿನಾಂಕ:02–02–2008ರಂದು ಆದೇಶವಾಗಿರುತ್ತದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕೋರಮಂಗಲ (ಕೇಂದ್ರ), ಬೆಂಗಳೂರು ಇವರಿಗೆ ಪತ್ರಸಂಖ್ಯೆ: ಬಿ3:ಅಮೊ:ವಾಹನ–23/07–08 ದಿನಾಂಕ:19–03–2008ರಲ್ಲಿ ಪತ್ರ ಬರೆದು ಕೋರಲಾಗಿತ್ತು. ಅವರಿಂದ ಯಾವುದೇ ಮಾಹಿತಿ 3 ತಿಂಗಳಾದರೂ ಬಾರದೇ ಇದ್ದಾಗ ಪುನಃ ದಿನಾಂಕ:07–06–2008ರಂದು ಜ್ಞಾಪನಾ ಪತ್ರ ಬರೆದಾಗ ಅವರಿಂದ ದಿನಾಂಕ:27–06–2008ರಂದು ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಬಿ ಪ್ರತಿಯಲ್ಲಿ ವಸಂತ ಕೋಕಿಲ ಬಿ.ಬಿ. ಬಿನ್ ರಾಜಶೇಖರ್, ಬಿ.ಎಸ್., ಮನೆ ನಂ.11/01, ಎಸ್.ಪಿ. ರಸ್ತೆ, ವಿ.ವಿ. ಪುರಂ, ಬೆಂಗಳೂರು ಇವರು ಆರ್.ಸಿ. ಮಾಲೀಕರೆಂದು ನಮೂದಿಸಿದ್ದರು. ಅದರಂತೆ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ನೋಟೀಸನ್ನು ದಿನಾಂಕ:14–07–2008ರಂದು ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ವಾಹನದ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಲು ತಿಳಿಸಿ ನೋಂದಣಿ ಅಂಚೆ ಮೂಲಕ ಜಾರಿ ಮಾಡಿದ ಲಕೋಟೆ ಮೇಲೆ "Left" ಎಂದು ಅಂಚೆ ಇಲಾಖೆಯವರು ನಮೂದಿಸಿ ಹಿಂದಿರುಗಿಸಿರುತ್ತಾರೆ.

ಈ ನಡುವೆ ಪ್ರಾದೇಶಿಕ ಸಾರಿಗೆ ಅಧಿಕಾರಿಯಿಂದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸುವುದರಲ್ಲಿ ವಿಳಂಬವಾಗಿದ್ದರಿಂದ ಈ ವಾಹನ ಜಪ್ತಾದ ಬಗ್ಗೆ ಪತ್ರಿಕಾ ಪ್ರಕಟಣೆಯನ್ನು ಬಿ3:ಅಮೊ:ವಾಹನ–01/08–09 ದಿ:10–04–2008 ರಂದು ಹೊರಡಿಸಿ 30 ದಿನಗಳ ಕಾಲಾವಕಾಶ ನೀಡಿ ಈ ವಾಹನದ ದಾಖಲೆಗಳೊಂದಿಗೆ ಸಮಜಾಯಿಷಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಲು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಮತ್ತು ಪ್ರಚಲಿತ ದಿನಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಈ ಪ್ರಕಟಣೆಯು ದಿನಾಂಕ:17–04–2008 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ಇಲ್ಲಿಯವರೆವಿಗೂ ಆರ್.ಸಿ. ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಈ ವಾಹನ ಬಿಡಿಸಿಕೊಳ್ಳಲು ಅರ್ಜಿ ಸಲ್ಲಿಸಿರುವುದಿಲ್ಲ.

ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಈ ನ್ಯಾಯಾಲಯಕ್ಕೆ ವಿಚಾರಣಾ ವರದಿ ಸಲ್ಲಿಸಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮತ್ತು ಆರೋಪಿ ವಿರುದ್ಧ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿ ಸಲ್ಲಿಸಲು ಅನುಮತಿ ಕೋರಿರುತ್ತಾರೆ. ಆರೋಪಿ ವಿರುದ್ಧ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿ ಸಲ್ಲಿಸಲು ಈ ನ್ಯಾಯಾಲಯದಿಂದ ಅನುಮತಿ ನೀಡಲಾಗಿರುತ್ತದೆ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:31–01–2009ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದರಿಂದ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆರ್.ಸಿ. ಮಾಲೀಕರಿಗೆ ನೋಟೀಸ್ ನೀಡಿದ್ದರೂ ಸಹ ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಬೀಟೆ ನಾಟಾಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಪನಿಯಮ 71(ಬಿ)(1)ರ ಪ್ರಕಾರ ಆರ್.ಸಿ. ಮಾಲೀಕರಿಗೆ ನೋಟೀಸ್ ಜಾರಿ ಮಾಡಿದ್ದು ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಜಪ್ತು ಮಾಡಿದ ವಾಹನ ಟೆಂಪೋಟ್ರಾವೆಲ್ಸ್ ನಂ.ಕೆಎ–01–ಎನ್–1687 (ಛಾಸ್ಸಿಸ್ ನಂ.TF-804207-H-94 ಇಂಜಿನ್ ನಂ.28036) ನ್ನು ಕರ್ನಾಟಕ ಸರ್ಕಾರದ ಸಂಪತ್ತು ಆದ ಬೀಟೆ ನಾಟಾ 3=0.411ಎಂ3ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದರಿಂದ ವಾಹನ ಟೆಂಪೋಟ್ರಾವೆಲ್ಸ್ ನಂ.ಕೆಎ–01–ಎನ್–1687 (ಛಾಸ್ಸಿಸ್ ನಂ.TF-804207-H-94 ಇಂಜಿನ್ ನಂ.28036) ಮತ್ತು ವಾಹನದಲ್ಲಿದ್ದ ಬೀಟೆ ನಾಟಾ 3=0.411ಎಂ3ನ್ನು ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:07–02–2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

ಪಿ.ಆರ್.159

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–02/05–06, ದಿನಾಂಕ:31ನೇ ಜನವರಿ, 2009**

**ಉಪಸ್ಥಿತರು :** ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು :** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ.
(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಬಾಧ್ಯತೆದಾರರು :** ಶ್ರೀ ಸೈಯದ್ ಮುಜಿಬುಲ್ಲಾ ಬಿನ್ ಸೈಯದ್ ರವೂಬ್ ಸಾಬ್, 26 ವರ್ಷ, ನವಲೆ ಅಂಚೆ, ಶಾಂತಿನಗರ, ಶಿವಮೊಗ್ಗ (ಶ್ರೀ ಟಿ.ಬಿ. ಮಂಜುನಾಥ ಶೆಟ್ಟಿ, ವಕೀಲರು, ಸಾಗರ)

**ಪ್ರಸ್ತಾವನೆ:**

ದಿನಾಂಕ:10–05–2005ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಮತ್ತು ಸಿಬ್ಬಂದಿಯವರು ಶಿಕಾರಿಪುರ ತಾಲ್ಲೂಕು ಅಂಜನಾಪುರ ಹೋಬಳಿ, ಶಿಕಾರಿಪುರ–ಶಿವಮೊಗ್ಗ ರಸ್ತೆಯಲ್ಲಿ ಇಲಾಖಾ ವಾಹನ ಜೀಪು–ಕೆಎ–14–ಜಿ–463ರಲ್ಲಿ ಹಾರೇಗೊಪ್ಪ ಕ್ಯಾಂಪ್ ವಸತಿ ಗೃಹದ ಹತ್ತಿರ ಗಸ್ತುಮಾಡುತ್ತಿರುವಾಗ ಶಿಕಾರಿಪುರ ಕಡೆಯಿಂದ ಒಂದು ವಾಹನ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ನಿಲ್ಲಿಸದೆ ವೇಗವಾಗಿ ಓಡಿಸಿಕೊಂಡು ಹೋದ ವಾಹನವನ್ನು ಇಲಾಖಾ ವಾಹನದಿಂದ ಬೆನ್ನಟ್ಟಿ ಮೇಲಿನ ಸ್ಥಳದಲ್ಲಿ ನಿಲ್ಲಿಸಿದಾಗ ವಾಹನದಲ್ಲಿದ್ದ ಆಸಾಮಿಗಳು ತಪ್ಪಿಸಿಕೊಂಡಿರುತ್ತಾರೆ. ನಂತರ ವಾಹನದ ಬಳಿ ಬಂದು ಪಂಚರ ಸಮಕ್ಷಮ ಮಹಜರ್ ಕ್ರಮ ಜರುಗಿಸಲಾಯಿತು. ಬಿಳಿ ಬಣ್ಣದ ಮಾರುತಿ ಓಮ್ನಿ ನಂ.ಕೆಎ–14–ಎಂ–3918 ಆಗಿದ್ದು, ವಾಹನದ ಒಳಗೆ ಸೀಟಿನ ಅಡಿಯಲ್ಲಿ ಬೀಟೆ ಜಾತಿಯ ಟರ್ನಿಂಗ್ ಮಾಡಿದ ಸೋಫಾ, ಕುರ್ಚಿಗಳ ಬಿಡಿ ಭಾಗಗಳಿದ್ದು, ಇವುಗಳಿಗೆ ರಹದಾರಿ ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು, ಈ ಸೈಜುಗಳನ್ನು ಅಳತೆ ಮಾಡಿ ಕ್ರಮಸಂಖ್ಯೆ ಕೊಟ್ಟು ಒಟ್ಟು 54=0.188ಎಂ3 ಇದ್ದು, ಕರ್ನಾಟಕ ಅರಣ್ಯ ಕಾಯ್ದೆ 1963, ಸೆಕ್ಷನ್ 24, 50ಕೆ, 62, 71(ಎ ರಿಂದ ಜಿ), 104 (ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ನಿಯಮ 144, 163, 165ರ ಪ್ರಕಾರ ಅರಣ್ಯ ಸಂಚಾರಿ ದಳ, ಶಿಕಾರಿಪುರ ಕಛೇರಿಯ ಅರಣ್ಯ ಮೊಕದ್ದಮೆ ಸಂಖ್ಯೆ: 13/05–06ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ದಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿರುತ್ತದೆ.

ನಂತರ ಈ ವಾಹನದ ಬಗ್ಗೆ ಹೆಚ್ಚಿನ ಪ್ರಕಟಣೆಯನ್ನು 30 ದಿನ ಕಾಲಾವಕಾಶ ನೀಡಿ ಪತ್ರ ಸಂಖ್ಯೆ: ಅಮೊ:ಸಿಆರ್–03–/05–06 ದಿನಾಂಕ:23–05–2005ರಂದು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿ, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿದೆ. ದಿನಾಂಕ:01–06–2005ರಂದು ಮನೋಭೂಮಿ ಮತ್ತು ದಿನಾಂಕ:03–06–2005ರಂದು ಸಾಗರ ಸಂದೇಶ ದಿನಪತ್ರಿಕೆಯಲ್ಲಿ ದಿನಾಂಕ:09–06–2005ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಣೆ ಪ್ರಕಟಗೊಂಡಿರುತ್ತದೆ.

ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರು ಈ ವಾಹನದ ಬಿ ಪ್ರತಿಯನ್ನು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಇವರ ಮುಖಾಂತರ ಈ ನ್ಯಾಯಾಲಯಕ್ಕೆ ದಿನಾಂಕ:19–12–2006ರಂದು ಒದಗಿಸಿರುತ್ತಾರೆ. ಈ ಬಿ ಪ್ರತಿಯಲ್ಲಿ ನಮೂದಿಸಿದ ಆರ್.ಸಿ. ಮಾಲೀಕರಾದ ಶ್ರೀ ಸೈಯದ್ ಮುಜಿಬುಲ್ಲಾ ಬಿನ್ ಸೈಯದ್ ರವೂಬ್ ಸಾಬ್, ನವಲೆ ಅಂಚೆ, ಶಾಂತಿನಗರ, ಶಿವಮೊಗ್ಗ ಇವರು ಮನವಿಯನ್ನು ತಯಾರಿಸಿ ಶ್ರೀ ಟಿ.ಬಿ. ಮಂಜುನಾಥ ಶೆಟ್ಟಿ, ವಕೀಲರು ಇವರ ಮುಖಾಂತರ ಈ ನ್ಯಾಯಾಲಯಕ್ಕೆ ದಿನಾಂಕ:15–06–2005ರಂದು ಸಲ್ಲಿಸಿರುತ್ತಾರೆ. ಆರ್.ಸಿ. ಮಾಲೀಕರಿಗೆ ದಿನಾಂಕ:25–06–2005ರಂದು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ನೋಂದಣಿ ಅಂಚೆ ಮೂಲಕ ಜಾರಿ ಮಾಡಿರುವುದನ್ನು ಅಂಚೆ ಇಲಾಖೆಯವರು ಈ ಲಕೋಟೆ ಮೇಲೆ "Not Known" ಎಂದು ನಮೂದಿಸಿ ಲಕೋಟೆ ಹಿಂದಿರುಗಿಸಿರುತ್ತಾರೆ.

ಆರ್.ಸಿ. ಮಾಲೀಕರು ಈ ವಾಹನವನ್ನು ಮಧ್ಯಂತರ ಸುಪರ್ದಿಗೆ ಬಿಟ್ಟುಕೊಡಲು ಕೋರಿದ ಅರ್ಜಿಯನ್ನು ದಿನಾಂಕ:01–12–2007ರಂದು ತಿರಸ್ಕರಿಸಿ ಆದೇಶವಾಗಿದೆ.

ಪ್ರಾಸಿಕ್ಯೂಷನ್ ಸಾಕ್ಷಿಯಾದ ಶ್ರೀ ಎಂ.ಆರ್. ಮಂಜುನಾಥ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಸೀಕೆರೆ ಇವರನ್ನು ದಿನಾಂಕ:02–02–2008ರಂದು ಕರೆಸಿ ಸತ್ಯ ಪ್ರತಿಜ್ಞೆ ಭೋದಿಸಲಾಯಿತು. ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ "ನಾನು ಅಕ್ಟೋಬರ್ 2003 ರಿಂದ ಜೂನ್ 2005ರವರೆಗೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯಾಗಿ ಅರಣ್ಯ ಸಂಚಾರಿ ದಳ, ಶಿಕಾರಿಪುರದಲ್ಲಿ ಕೆಲಸ ನಿರ್ವಹಿಸಿರುತ್ತೇನೆ. 10–05–2005ರಂದು ನಾನು ಸಿಬ್ಬಂದಿಯೊಂದಿಗೆ ನಮ್ಮ ವ್ಯಾಪ್ತಿಯಲ್ಲಿ ಗಸ್ತು ಮಾಡುತ್ತಾ ಹಾರೆಗೊಪ್ಪದ ಬಳಿ ಕಾಯುತ್ತಿದ್ದಾಗ ಸುಮಾರು ಮಧ್ಯಾಹ್ನ 2–00 ಸಮಯದಲ್ಲಿ ಶಿಕಾರಿಪುರದ ಕಡೆಯಿಂದ ಒಂದು ಬಿಳಿಯ ಮಾರುತಿ ಓಮ್ನಿ ವಾಹನ ಬಂದಿತು. ಅನುಮಾನ ಬಂದು ನಿಲ್ಲಿಸಲು ಸೂಚಿಸಿದಾಗ ಸದರಿ ವಾಹನ ಚಾಲಕನು ವಾಹನ ನಿಲ್ಲಿಸದೆ ಶಿವಮೊಗ್ಗದ ಕಡೆ ಹೋದಾಗ ನಾವು ಇಲಾಖಾ ವಾಹನದಲ್ಲಿ ಬೆನ್ನಟ್ಟಿ ಹಾರೇಗೊಪ್ಪದಿಂದ 2 ಕಿ.ಮೀ.ದೂರದಲ್ಲಿ ಕ್ಯಾಂಪ್ ಹತ್ತಿರ ತಡೆದು ನಿಲ್ಲಿಸಿದೆವು. ಅದರಲ್ಲಿದ್ದ 3 ಜನ ವ್ಯಕ್ತಿಗಳು ಓಡಿಹೋಗಿದ್ದು, ಹಿಡಿಯಲು ಪ್ರಯತ್ನಿಸಿದರೂ ಸಿಕ್ಕಿರುವುದಿಲ್ಲ. ವಾಹನ ಸಂಖ್ಯೆ: ಕೆಎ–14–ಎಂ–3918 ಆಗಿದ್ದು, ವಾಹನವನ್ನು ಪರಿಶೀಲಿಸಿದಾಗ ಅದರ ಸೀಟಿನ ಅಡಿಯಲ್ಲಿ ಕೊಯ್ದ 54 ಬೀಟೆ ಸೈಜುಗಳಿರುವುದು ಕಂಡುಬಂದಿತು. ಅವುಗಳ ಮೇಲೆ ಯಾವುದೇ ಇಲಾಖಾ ಛಾಪಾವಿರಲಿಲ್ಲ. ಇದನ್ನು ಪಂಚಾಯ್ತಿದಾರರ ಸಮಕ್ಷಮ ಸದರಿ ತುಂಡುಗಳ ಅಳತೆ ಮಾಡಿ ಕ್ರಮಸಂಖ್ಯೆ ಕೊಟ್ಟು ವಾಹನವನ್ನು ಮತ್ತು ಸದರಿ ತುಂಡುಗಳನ್ನು ಮಹಜರ್ ಅಡಿಯಲ್ಲಿ ಪಂಚರ ಸಮಕ್ಷಮ ಅಮಾನತ್ತು ಪಡಿಸಿಕೊಂಡೆವು. ದೂರವಾಣಿ ಮೂಲಕ ಕಛೇರಿಯನ್ನು ಸಂಪರ್ಕಿಸಿ ಮೊಕದ್ದಮೆ ಸಂಖ್ಯೆಯನ್ನು ಪಡೆಯಲಾಗಿತ್ತು. ನಂತರ ವಾಹನವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಗೆ ಮತ್ತು ತುಂಡುಗಳ ಶಿಕಾರಿಪುರ ನಾಟಾ ಸಂಗ್ರಹಾಲಯಕ್ಕೆ ಸಾಗಿಸಲಾಯಿತು. ಮುಂದಿನ ತನಿಖೆಯನ್ನು ಕೃಷ್ಣಮೂರ್ತಿ, ವನಪಾಲಕರಿಗೆ ಹಸ್ತಾಂತರಿಸಿದ್ದು, ಅವರ ಪ್ರಥಮ ವರ್ತಮಾನ ವರದಿಯನ್ನು ತಯಾರಿಸಿ ಜಪ್ತು ವರದಿಯನ್ನು ತಯಾರಿಸಿರುತ್ತಾರೆ. ಸದರಿ ವಾಹನವನ್ನು ಅಕ್ರಮ ಬೀಟೆ ಸಾಗಿಸಲು ಉಪಯೋಗಿಸಿರುವುದರಿಂದ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ. ಆ ದಿನ ಮಾಡಿದ ಮಹಜರ್ ಈಗ ನೋಡುತ್ತಿದ್ದು ನಿಪಿ–1 ಎಂದು, ನನ್ನ ಸಹಿಯನ್ನು ನಿಪಿ–1ಎ ಎಂದು ಗುರ್ತಿಸಲಾಯಿತು. ಆ ದಿನ ಸಲ್ಲಿಸಿದ ಪ್ರಥಮ ವರ್ತಮಾನ ವರದಿಯನ್ನು ಈಗ ನೋಡುತ್ತಿದ್ದು ನಿಪಿ–2 ಎಂದು, ಜಪ್ತಿವರದಿಯನ್ನು ನಿಪಿ–3 ಎಂದು, ಆ ಬಗ್ಗೆ ವಿಚಾರಣಾ ವರದಿಯನ್ನು ನಾನೇ ತಯಾರಿಸಿದ್ದು, ಅದನ್ನು ನಿಪಿ–4 ಎಂದು, ಅಮಾನತ್ತುಪಡಿಸಿದ ವಾಹನದ ಬಿ ಪ್ರತಿಯನ್ನು ನಿಪಿ–5 ಎಂದು ಗುರ್ತಿಸಲಾಯಿತು.

ಪಾಟೀ ಸವಾಲು: ಟಿ.ಬಿ.ಎಂ. ವಕೀಲರಿಂದ– ನಾನು ಜಪ್ತುಮಾಡಿದ ವಸ್ತುಗಳು ಸೋಫಾ ಮತ್ತು ಕುರ್ಚಿಗಳ ಬಿಡಿಭಾಗಗಳಾಗಿದ್ದು, ಅವುಗಳೆಲ್ಲವೂ ಸಹ ಸಿದ್ಧ ವಸ್ತುಗಳಾಗಿರುತ್ತವೆ. ಎಷ್ಟು ಸೋಫ ಮತ್ತು ಎಷ್ಟು ಕುರ್ಚಿ ಎಂದು ಈಗ ಹೇಳಲು ಬರುವುದಿಲ್ಲ. ಸದರಿ ಕುರ್ಚಿ ಮತ್ತು ಸೋಫಾ ಬಿಡಿಭಾಗಗಳನ್ನು ಯಾವ ಸಾಮಿಲ್‌ನಿಂದ ಖರೀದಿ ಮಾಡಿದ್ದರು ಮತ್ತು ಯಾವ ಟರ್ನಿಂಗ್ ಮೆಷಿನ್‌ನಿಂದ ಟರ್ನಿಂಗ್ ಮಾಡಿದ್ದರೆಂದು ನನಗೆ ಗೊತ್ತಿರುವುದಿಲ್ಲ. ಬೀಟೆ ಮರವನ್ನು ಖಾಸಗಿ ಜಮೀನಿನಲ್ಲೂ ಸಹ ಬೆಳೆಯುವುದು ನಿಜವಿರುತ್ತದೆ. ನಾವು ಜಪ್ತು ಮಾಡಿದ ವಾಹನವು ಯಾವ ಊರಿನಿಂದ ಬಂದಿತ್ತು ಎಂಬುದು ನನಗೆ ತಿಳಿದಿರುವುದಿಲ್ಲ. ಸದರಿ ವಾಹನವನ್ನು ಆನಂದಪುರದ ಮುಜಬುಲ್ಲ ಎಂಬುವವರ ಅಣ್ಣನ ಮನೆಯ ಮುಂದೆ ನಿಲ್ಲಿಸಿದ್ದು, ಕಳುವಾದ ಬಗ್ಗೆ ನನಗೆ ತಿಳಿದಿರುವುದಿಲ್ಲ. ಸದರಿ ವಾಹನದ ಮೇಲೆ ಮದ್ರಾಸ್ ವಿಕ್ರಮ ಫೈನಾನ್ಸ್ ಎಂಬುವವರು 40,000/– ಹಣವನ್ನು ಸಾಲ ಕೊಟ್ಟ ಬಗ್ಗೆ ನನಗೆ ತಿಳಿದಿರುವುದಿಲ್ಲ. ಸದರಿ ವಾಹನದ ಮೇಲಿರುವ ಹಣವನ್ನು ಸಕಾಲದಲ್ಲಿ ಮರುಪಾವತಿ ಮಾಡದೇ ಇರುವುದರಿಂದ ಸಾಲ ಕೊಟ್ಟ ಫೈನಾನ್ಸ್ ಕಂಪನಿಯವರು ಪದೇ ಪದೇ ಸದರಿ ವಾಹನವನ್ನು ತೆಗೆದುಕೊಂಡು ಹೋಗುವುದು ನನಗೆ ತಿಳಿಯದ ವಿಷಯ. ದಿನಾಂಕ:10–05–2005ರ ಬೆಳಿಗ್ಗೆ ಆನಂದಪುರದ ಮನೆಯ ಮುಂದೆ ನಿಲ್ಲಿಸಿದ್ದ ವಾಹನವು ಇಲ್ಲದೇ ಇರುವುದನ್ನು ನೋಡಿ ಸಾಲ ಕೊಟ್ಟ ಹಣಕಾಸು ಸಂಸ್ಥೆಯವರೇ ತೆಗೆದುಕೊಂಡು ಹೋಗಿರಬಹುದೆಂದು ಊಹಿಸಿರುವುದು ಸಹ ನನಗೆ ತಿಳಿದಿರುವುದಿಲ್ಲ. ದಿನಾಂಕ;01–06–2005ರಲ್ಲಿ ಸದರಿ ವಾಹನವು ಜಪ್ತಾದ ಬಗ್ಗೆ ಮನೋಭೂಮಿ ಎಂಬ ಸ್ಥಳೀಯ ಪತ್ರಿಕೆಯಲ್ಲಿ ಪ್ರಥಮ ಬಾರಿಗೆ ಜಾಹಿರಾತು ನೀಡಿದ್ದು ಸರಿಯಿರುತ್ತದೆ. ಪತ್ರಿಕೆಯಲ್ಲಿ ಜಾಹಿರಾತು ನೋಡಿದ ನಂತರ ಸದರಿ ವಾಹನದ ಮಾಲೀಕರಾದ ಶ್ರೀ ಸೈಯದ್

ಮುಜಿಬುಲ್ಲಾರವರು ದಿನಾಂಕ:15-06-2005ರಂದು ಸಾಗರ ಅರಣ್ಯ ಇಲಾಖೆಗೆ ಬಂದು ವಾಹನದ ಬಿಡುಗಡೆ ಬಗ್ಗೆ ಅರ್ಜಿ ಸಲ್ಲಿಸಿರುವುದು ನಿಜವಿರುತ್ತದೆ. ಸೈಯದ್ ಮುಜಿಬುಲ್ಲಾರವರನ್ನು ಇದುವರೆಗೆ ನಾನು ನೋಡಿರುವುದಿಲ್ಲ ಮತ್ತು ಅವರ ಪರಿಚಯವಿರುವುದಿಲ್ಲ. ಸದರಿ ಬೀಟೆ ಪ್ರಕರಣಕ್ಕೂ ಮತ್ತು ವಾಹನ ಮಾಲೀಕರಿಗೂ ಸಂಬಂಧವಿಲ್ಲವೆನ್ನುವುದು ನನಗೆ ತಿಳಿಯದ ವಿಷಯ. ಸದರಿ ವಾಹನವು ಮಾಡಿದ ಅಪರಾಧ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿಲ್ಲವೆನ್ನುವುದು ನನಗೆ ತಿಳಿದಿಲ್ಲ."

ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ಪಡೆಯಲು ದಿನಾಂಕ:01-03-2008, 29-03-2008, 18-10-2008ರಂದು ಸಮಯ ನಿಗದಿಪಡಿಸಲಾಗಿತ್ತು. ಆದರೆ ಈ ದಿನಗಳಲ್ಲಿ ಆರ್.ಸಿ. ಮಾಲೀಕರು ಹಾಜರಾಗಿರುವುದಿಲ್ಲ. ಆದ್ದರಿಂದ ಆರ್.ಸಿ. ಮಾಲೀಕರಿಗೆ ಈ ಪ್ರಕರಣದಲ್ಲಿ ತಮ್ಮ ಹೇಳಿಕೆ ಹೇಳಲು ಆಸಕ್ತಿ ಇಲ್ಲವೆಂದು ಪರಿಗಣಿಸಿ ಮುಂದಿನ ಹಂತವಾದ ವಾದಕ್ಕೆ ದಿನಾಂಕವನ್ನು ದಿನಾಂಕ:09-11-2008ರಂದು ನಿಗದಿಪಡಿಸಲಾಯಿತು. ದಿನಾಂಕ:29-11-2008ರಂದು ಆರ್.ಸಿ. ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ಹಾಜರಾಗಿರುವುದಿಲ್ಲ. ಡಿಫೆನ್ಸ್ ಕಡೆ ವಾದ ಏನೂ ಇಲ್ಲವೆಂದು ಪರಿಗಣಿಸಲಾಯಿತು. ಸಹಾಯಕ ಸರ್ಕಾರಿ ಅಭಿಯೋಜಕರು ವಾದ ಮಂಡಿಸಿ ಅರಣ್ಯ ಉತ್ಪನ್ನ ಕಳ್ಳಸಾಗಾಣಿಕೆ ಮಾಡಿರುವುದು ಪ್ರಾಸಿಕ್ಯೂಷನ್ ಕಡೆಯವರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ದಾಖಲೆಗಳಿಂದ ಮತ್ತು ಸಾಕ್ಷಿ ಹೇಳಿಕೆಯಿಂದ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1) ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಮಾರುತಿ ವ್ಯಾನ್ ಕೆಎ-14-ಎಂ-3918ರಲ್ಲಿ ಬೀಟೆ ಸೈಜ್ 54=0.188ಎಂ3 ಅನ್ನು ದಿನಾಂಕ:10-05-2005ರಂದು ಕಾನೂನಿನ ವಿರುದ್ಧವಾಗಿ ಸಾಗಿಸಲು ಉಪಯೋಗಿಸಲಾಗಿತ್ತೆ ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2) ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3) ವಾಹನದ ಮಾಲೀಕರು ಅಥವಾ ಅವರ ಕೆಲಸಗಾರರು ಅಥವಾ ಅವರ ಪ್ರತಿನಿಧಿಗಳು ಮಾರುತಿ ವ್ಯಾನಿನಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆ ಸೈಜ್‌ಗಳನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ ಹಾಗೂ ಈ ವಾಹನದ ಮಾಲೀಕರ ಅಥವಾ ಅವರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆಯೇ ಈ ವಾಹನವನ್ನು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ, ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ವಾಹನದ ಚಾಲಕರು ಅಥವಾ ಅವರ ಪ್ರತಿನಿದಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?

4) ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ. ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1) ಒಂದನೇ ಅಂಶಕ್ಕೆ ಹೌದು ಎಂತಲೂ

2) ಎರಡನೇ ಅಂಶಕ್ಕೆ ಹೌದು ಎಂತಲೂ

3) ಮೂರನೇ ಅಂಶದ ಮೊದಲಿನ ಭಾಗದ ಪ್ರಶ್ನೆಗೆ ಹೌದು ಎಂದು, ಎರಡನೇ ಭಾಗದ ಪ್ರಶ್ನೆಗೆ ಇಲ್ಲ ಎಂದಾಗಿರುತ್ತದೆ.

**ಅಂಶ-1:**

ದಿನಾಂಕ:10-05-2005ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಮತ್ತು ಸಿಬ್ಬಂದಿಯವರು ಇಲಾಖಾ ವಾಹನ ಕೆಎ-14-ಜಿ-463ರಲ್ಲಿ ಶಿಕಾರಿಪುರ ತಾಲ್ಲೂಕು ಅಂಜನಾಪುರ ಹೋಬಳಿ ಶಿಕಾರಿಪುರ-ಶಿವಮೊಗ್ಗ ರಸ್ತೆಯ ಹಾರೇಗೊಪ್ಪ ಕ್ಯಾಂಪ್ ಕ್ವಾಟ್ರಸ್ ಹತ್ತಿರ ಗಸ್ತು ಮಾಡುತ್ತಿರುವಾಗ ಶಿಕಾರಿಪುರ ಕಡೆಯಿಂದ ಒಂದು ವಾಹನವು ಸುಮಾರು ಮಧ್ಯಾಹ್ನ 2 ಗಂಟೆ ಸಮಯದಲ್ಲಿ ಬರುತ್ತಿರುವುದನ್ನು ನಿಲ್ಲಿಸಿ ತಪಾಸಣೆ ಮಾಡಿದಾಗ ಬೀಟೆ ಸೈಜ್ 54=0.188ಎಂ3 ಇದ್ದು, ಇವುಗಳನ್ನು ಸಾಗಿಸಲು ರಹದಾರಿ ಇಲ್ಲದೇ ಇರುವುದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಪಂಚರ ಸಮಕ್ಷಮ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 50ಕೆ, 62, 71(ಎ ರಿಂದ ಜಿ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ನಿಯಮ 144, 163, 165ರ ಪ್ರಕಾರ ಅರಣ್ಯ ಮೊಕದ್ದಮೆ ಸಂಖ್ಯೆ: 13/05-06ನ್ನು ದಾಖಲಿಸಿ ಈ ನ್ಯಾಯಾಲಯಕ್ಕೆ ವಾಹನವನ್ನು ಎಲ್ಲಾ ದಾಖಲೆಗಳೊಂದಿಗೆ ಸಲ್ಲಿಸಿರುತ್ತಾರೆ. ದಾಖಲೆಗಳಿಂದ ಮತ್ತು ಪ್ರಾಸಿಕ್ಯೂಷನ್ ಸಾಕ್ಷಿ

ಹೇಳಿಕೆಯಿಂದ ಈ ವಾಹನವನ್ನು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಗೆ ಬಳಸಿರುವುದು ಸಾಬೀತಾಗಿದೆ. ಸದರಿ ನಾಟಾ ಸಾಗಿಸಲು ರಹದಾರಿ ಇಲ್ಲದೇ ಇರುವುದರಿಂದ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆ ಎಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಸೈಯದ್ ಮುಜಿಬುಲ್ಲಾ ಬಿನ್ ಸೈಯದ್ ರವೂಬ್ ಸಾಬ್, ನವಲೆ ಅಂಚೆ, ಶಾಂತಿನಗರ, ಶಿವಮೊಗ್ಗ ಇವರು ದಿನಾಂಕ:15–06–2005ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. ಇವರ ಅರ್ಜಿಯಲ್ಲಿ ಮತ್ತು ಬಿ ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದ ವಿಳಾಸದಂತೆ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿನಾಂಕ:25–06–2005ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ಈ ಜಾರಿ ಮಾಡಿದ ಲಕೋಟೆಯ ಮೇಲೆ ಅಂಚೆ ಇಲಾಖೆಯವರು "Not Known" ಎಂದು ನಮೂದಿಸಿ ಲಕೋಟೆಯನ್ನು ಈ ನ್ಯಾಯಾಲಯಕ್ಕೆ ಹಿಂದಿರುಗಿಸಿರುತ್ತಾರೆ. ನಂತರ ಆರ್.ಸಿ. ಮಾಲೀಕರು ಈ ವಾಹನವನ್ನು ಮಧ್ಯಂತರ ಸುಪರ್ದಿಗೆ ಬಿಟ್ಟುಕೊಡಲು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯನ್ನು ದಿನಾಂಕ:01–12–2007ರಂದು ತಿರಸ್ಕರಿಸಿ ಆದೇಶವಾಗಿದೆ. ನಂತರ ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆ ಪಡೆದಿದೆ. ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ದಿನಾಂಕ:01–03–2008, 29–03–2008, 18–10–2008ರಂದು ಸಮಯ ನಿಗದಿಪಡಿಸಲಾಗಿತ್ತು. ಒಮ್ಮೆಯೂ ಆರ್.ಸಿ. ಮಾಲೀಕರು ಹಾಜರಾಗಿರುವುದಿಲ್ಲ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ಶಿಕಾರಿಪುರ ತಾಲ್ಲೂಕು ಅಂಜನಾಪುರ ಹೋಬಳಿ ಶಿಕಾರಿಪುರ–ಶಿವಮೊಗ್ಗ ರಸ್ತೆಯಲ್ಲಿ ದಿನಾಂಕ:10–05–2005ರಂದು ಸುಮಾರು ಮಧ್ಯಾಹ್ನ 2 ಗಂಟೆ ಸಮಯದಲ್ಲಿ ಮಾರುತಿ ವ್ಯಾನ್ ಕೆಎ–14–ಎಂ–3918ರಲ್ಲಿ ಬೀಟೆ ಸೈಜ್ 54=0.188ಎಂ3ನ್ನು ರಹದಾರಿ ಇಲ್ಲದೆ ಅಕ್ರಮವಾಗಿ ಸಾಗಿಸುತ್ತಿದ್ದಾಗ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಮತ್ತು ಇವರ ಸಿಬ್ಬಂದಿಯವರು ಪಂಚರ ಸಮಕ್ಷಮ ಇಲಾಖಾ ಪರ ವಾಹನ ಮತ್ತು ಬೀಟೆ ಸೈಜುಗಳನ್ನು ಜಪ್ತು ಮಾಡಿ, ಅರಣ್ಯ ಮೊಕದ್ದಮೆ ಸಂಖ್ಯೆ: 13/05–06ನ್ನು ದಾಖಲಿಸಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಜಪ್ತಿ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರುಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಮತ್ತು ಈ ವಾಹನದಲ್ಲಿ ಬೀಟೆ ಸೈಜುಗಳನ್ನು ಬಿಡಿಸಿಕೊಳ್ಳಲು ಯಾರೂ ಈ ನ್ಯಾಯಾಲಯಕ್ಕೆ ಕ್ಲೈಮು ಅರ್ಜಿ ಸಲ್ಲಿಸಿರುವುದಿಲ್ಲ. ಆರ್.ಸಿ. ಮಾಲೀಕರು ಈ ನ್ಯಾಯಾಲಯಕ್ಕೆ ದಿನಾಂಕ:15–06–2005ರಂದು ಅರ್ಜಿ ಸಲ್ಲಿಸಿ ಅದರಲ್ಲಿ ತಿಳಿಸಿದಂತೆ ಈ ವಾಹನದಲ್ಲಿ ಬೀಟೆ ಸೈಜ್‌ಗಳನ್ನು ಯಾರೋ ದುಷ್ಕರ್ಮಿಗಳು ಸಾಗಿಸಿ ಇವರ ಗಮನಕ್ಕೆ ಬಾರದಂತೆ ಈ ಕೃತ್ಯದಲ್ಲಿ ಇವರ ವ್ಯಾನನ್ನು ಉಪಯೋಗಿಸಿರುತ್ತಾರೆಂದು ಮತ್ತು ಈ ವಾಹನವನ್ನು ಬಾಧ್ಯತೆದಾರರ ಅಣ್ಣ ಸೈಯದ್ ಇದಾಯದ್‌ವುಲ್ಲಾ, ಆನಂದಪುರಂ ಇವರಿಗೆ ನಡೆಸಲು ಕೊಟ್ಟಿದ್ದು, ಇವರು ಶಿವಮೊಗ್ಗದಲ್ಲಿ ವ್ಯವಹಾರ ಮಾಡಿಕೊಂಡಿರುತ್ತಾರೆಂದು, ವಿಕ್ರಮ್ ಫೈನಾನ್ಸ್‌ನಿಂದ ಸಾಲ ಮಾಡಿ ಪಡೆದಿದ್ದೆಂದು, ಮನೆಯ ಮುಂದೆ ನಿಲ್ಲಿಸಿದ ವಾಹನ ದಿನಾಂಕ:10–05–2005ರ ಬೆಳಿಗ್ಗೆ ನೋಡಿದಾಗ ಕಾಣಲಿಲ್ಲವೆಂದು, ಈ ಎಲ್ಲಾ ವಿವರಗಳಿಗೆ ಈ ವಾಹನದ ವಿಚಾರಣಾ ಕಾಲದಲ್ಲಿ ಯಾವುದೇ ಸಾಕ್ಷಾಧಾರಗಳನ್ನು ಡಿಫೆನ್ಸ್ ಕಡೆಯವರು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆಗೆ ಆರ್.ಸಿ. ಮಾಲೀಕರು ಮತ್ತು ಅವರ ಪ್ರತಿನಿಧಿಗಳು ಉಪಯೋಗಿಸಿರುತ್ತಾರೆ. ಆದರೆ ಯಾರೂ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರು ಮುನ್ನೆಚ್ಚರಿಕೆ ಕ್ರಮ ಕೈಗೊಂಡಿರುವುದಿಲ್ಲ ಎಂಬುದು ನನ್ನ ಉತ್ತರವಾಗಿದೆ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶ ನೀಡಬಯಸುತ್ತೇನೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿಯವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ಕೆಎ–14–ಎಂ–3918 ಮತ್ತು ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಬೀಟೆ ಸೈಜ್ 54=0.188ಎಂ3ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ ಮಾರುತಿ ವ್ಯಾನ್ ಕೆಎ–14–ಎಂ–3918 ಮತ್ತು ವಾಹನದಲ್ಲಿದ್ದ ಬೀಟೆ ಸೈಜ್

54=0.188 ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:31–01–2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರೂ ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಪಿ.ಆರ್.334 ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**IN THE COURT OF 1ST TRAFFIC METROPOLITAN MAGISTRATE, BANGALORE CITY**

It hereby notified to the public that the Airport Police Station, Bangalore City have seized the following vehicles a unclaimed and such vehicles are lying in the Police Station as unclaimed so far. Hence the owners of the (Vehicles) may put their claim one month from the date of this publication.

Bangalore City 1st Traffic Metropolitan Magistrate, Bangalore City.

List of Unclaimed are lying in Airport Police Station, Bangalore City which have been seized under various C miss Cases.

| Sl. No. | Cmiss No. | PF No. | Reg No And Description of Vehicle | Chasis No | Engine No |
|---|---|---|---|---|---|
| 1. | 109/03 | 25/03 | Maruthi 800 DNB-7046 | Nil | Nil |
| 2. | 55/07 | 61/07 | Yezdi Reg No. KA-03-R-1452 | 087259 | 015343 |
| 3. | 56/07 | 62/07 | Bajaj Boxer KA-03-EP-9614 | DFFBJA20759 | DFMBJA20651 |
| 4. | 63/07 | 66/07 | Suzuki Samurai No. KA-17-J-6411 | 7709F877438 | 7709M923665 |
| 5. | 63/07 | 66/07 | TVS Champ KA-01-X-5007 | MD621BD184IN25921 | Nil |
| 6. | 64/07 | 67/07 | Suzuki Samurai KA-01-H-8033 | Nil | 3508MO21890 |
| 7. | 64/07 | 67/07 | TVS Champ KA-03-P-318 | - | Nil |
| 8. | 189/07 | 149/07 | Bajaj Pulsar KA-05-EX-5557 | DHBBMC53865 | DHGBMC52832 |
| 9. | 193/07 | 151/07 | Yamaha Enticer DL-1SN2752 | 02M5US030920 | 5USO30920 |
| 10. | 151/08 | 98/08 | Active Honda KE-04-EP-2503 | ME4JF085A58666045 | JF08E0684135 |
| 11. | 151/08 | 98/08 | Active Honda KA-03-EW-7618 | ME4JF082E68237584 | JF08E8416427 |
| 12. | 52/08 | 25/08 | Hero Honda Street-100 CG-07Z EA5914 | Nil | 99D30M00036 |
| 13. | 15/08 | 5/08 | Royal Enfield Bullet | 6B338171 | 338171 |

Ist Traffic Metropolitan Magistrate,
PR-492 Bangalore City.

**STATEMENT SHOWING LOSS OF "C" FORM IN THE FOLLOWING CASE IN THE OFFICE OF THE ASSISTANT COMMISSIONER OF COMMERCIAL TAXES, LOCAL VAT OFFICE-025, KORAMANGAL, BANGALORE**

| Sl. No. | Number (Including Code No.) of declaration Forms Lost/Destroyed or stolen | Name and address of the dealer to whom declaration Forms/ is/are issued by the department with date of "C" Form issue | Registration certificate No. of the dealer under CST Act 1956 | The Address of the dealer to whom the declaration is/ are sent | Date of issue of Form/s by the dealer | Whether Lost/ Stolen/ Destroyed | Remarks |
|---|---|---|---|---|---|---|---|
| 1. | KA-C/01 0493202 | M/s Hanuman Poly Sacks & Jute products. No.8A, 8th Cross, Bommasandra Industrial Area, Hosur Road, Bangalore-562158 | TIN-29690132571 | M/s Reliance Industries Limited, Gujarat. | 15.04.2009 | Lost | Rs.88,11,136-00 |

Assistant Commissioner of Commercial Taxes, LVO-025, Bangalore.

PR-493

**ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ**

**ನಮೂನೆ**

**ಸಚಿವಾಲಯ** : ಕರ್ನಾಟಕ ಸರ್ಕಾರ

**ಇಲಾಖೆ** : ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ.

**ಸಬ್ ಯೂನಿಟ್:** ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ.

**ಸಾರ್ವಜನಿಕ ಪ್ರಾಧಿಕಾರಿ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ), ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಕೆ.ಆರ್. ವೃತ್ತ, ಬೆಂಗಳೂರು–560 001.

| ಮೇಲ್ಮನವಿ ಪ್ರಾಧಿಕಾರಿ (ಹೆಸರು/ ವಿಳಾಸ/ ಫೋನ್ ಇತ್ಯಾದಿ) | ಸಾರ್ವಜನಿಕ ಮಾಹಿತಿ ಅಧಿಕಾರಿ (ಹೆಸರು/ವಿಳಾಸ/ಫೋನ್ ಇತ್ಯಾದಿ) | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಹೆಸರು/ವಿಳಾಸ/ಫೋನ್ ಇತ್ಯಾದಿ) |
|---|---|---|
| ಶ್ರೀ ಬಿ.ಟಿ. ಕಾಂತರಾಜ್, ಅಧೀಕ್ಷಕ ಅಭಿಯಂತರರು, ಲೋ.ಬಂ. ಮತ್ತು ಒ.ಜ.ಸಾ. ಇಲಾಖೆ, ಶಿವಮೊಗ್ಗ ವೃತ್ತ, ಶಿವಮೊಗ್ಗ–577201 | ಶ್ರೀ ಜಿ.ಆರ್. ಚಂದ್ರಶೇಖರಪ್ಪ, ಕಾರ್ಯಪಾಲಕ ಇಂಜಿನಿಯರ್, ಲೋ.ಬಂ. ಮತ್ತು ಒ.ಜ.ಸಾ.ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ–577201 | ಶ್ರೀ ಡಿ.ಎಸ್. ನಾಗರಾಜ್, ತಾಂತ್ರಿಕ ಸಹಾಯಕರು, ಕಾರ್ಯಪಾಲಕ ಇಂಜಿನಿಯರ್‌ರ ಕಛೇರಿ, ಲೋ.ಬಂ. ಮತ್ತು ಒ.ಜ.ಸಾ. ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ–577 201. |
| ಫ್ಯಾಕ್ಸ್–08182–270926 | ಫ್ಯಾಕ್ಸ್–08182–274942 | ಫ್ಯಾಕ್ಸ್–08182–274942 |
| ಕಛೇರಿ ಫೋನ್–08182–270926 | ಕಛೇರಿ ಫೋನ್–08182–274942 | ಕಛೇರಿ ಫೋನ್–08182–274942 |
| ಇ–ಮೇಲ್:SeSmg@Kpwd.gov.in | ಇ–ಮೇಲ್: eeSmg@Kpwd.gov.in | ಇ–ಮೇಲ್: eeSmg@Kpwd.gov.in |

ಕಾರ್ಯಪಾಲಕ ಅಭಿಯಂತರರು, ಲೋ.ಬಂ. ಮತ್ತು ಒ.ಜ.ಸಾ. ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ.

**Executive Engineer, PW Port & I W T Department, Shimoga Division, Shimoga**

**FORMAT**

**Secretariat:** Govt. of Karnataka.

**Department:** Public Works Department.

**Sub Unit:** The Executive Engineer, PW Port & I W T Dept. Shimoga Division, Shimoga.

**Public Authority:** Dept. K.R. Circle, Bangalore-560 001.

| Applellate Authority (Name/ Address/ Phone etc.) | Public Information Officer (Name/ Address/ Phone etc.) | Assistant Public Information Officer (Name/ Address/ Phone etc.) |
|---|---|---|
| Sri B.T. Kantharaj, Superintending Engineer, PW Port & I W T Dept. Shimoga Circle, Shimoga-577201. | Sri G.R. Chandrashekharappa, Executive Engineer PW Port & I W T Dept. Shimoga Division, Shimoga-577201. | Sri D.S. Nagaraj Technical Assistant, O/o the Executive Engineer, PW Port & I W T Dept., Shimoga Division, Shimoga-577201. |
| Fax-08182-270926 | Fax-08182-274942 | Fax-08182-274942 |
| Phone Office:08182-270926 | Phone Office:08182-274942 | Phone Office:08182-274942 |
| E-Mail:SeSmg@Kpwd.gov.in | E-Mail:eeSmg@Kpwd.gov.in | E-Mail:eeSmg@Kpwd.gov.in |

Executive Engineer,
PW Port & I W T Dept., Shimoga
Division, Shimoga.

PR-479

**ಒಳಾಡಳಿತ ಇಲಾಖೆ**

**ಸೇರ್ಪಡೆ ಆದೇಶ**

**ಸಂಖ್ಯೆ: ಒಇ 192 ಪೊಸಿಪ 2002 (ಭಾಗ–1), ಬೆಂಗಳೂರು, ದಿನಾಂಕ:28ನೇ ಮೇ, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 192 ಪೊಸಿಪ 2002 ದಿನಾಂಕ:08.12.2008ರ ಎರಡನೇ ಪ್ಯಾರಾದ 17ನೇ ಸಾಲಿನಲ್ಲಿ ಈ ಕೆಳಕಂಡಂತೆ ಸೇರ್ಪಡೆಯನ್ನು ಓದಿಕೊಳ್ಳತಕ್ಕದ್ದು.

"ಪ್ರಕಟಿಸಿದ ಡಿವೈ.ಎಸ್.ಪಿ. ಅಂತಿಮ ಜೇಷ್ಠತಾ ಪಟ್ಟಿಯನ್ನು ಕೆ.ಸಿ.ಎಸ್. (ಆರ್.ಪಿ.ಪಿ) ಆಕ್ಟ್ 1973ರ ಅಧಿನಿಯಮ 4(8)ರ ಪ್ರಕಾರ ಡಿವೈ.ಎಸ್.ಪಿ. ರಿಕ್ತ ಸ್ಥಾನ ಆಧರಿಸಿ ಅರ್ಹತಾ ದಿನಾಂಕವನ್ನು ನೀಡಲಾಗಿದೆ. ಅರ್ಹತಾ ದಿನಾಂಕದಿಂದ ವೇತನವನ್ನು ಕಾಲ್ಪನಿಕವಾಗಿ ನಿಗದಿಪಡಿಸಿ, ಆರ್ಥಿಕ ಸೌಲಭ್ಯವನ್ನು ಮುಂಬಡ್ತಿ ಪಡೆದ ಹುದ್ದೆಗೆ ವಾಸ್ತವವಾಗಿ ವರದಿ ಮಾಡಿದ ದಿನಾಂಕದಿಂದ ಪಡೆಯಲು ಅರ್ಹರಿರುತ್ತಾರೆ" ಎಂದು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್.472

**ಒಳಾಡಳಿತ ಇಲಾಖೆ**

**ಸೇರ್ಪಡೆ ಆದೇಶ**

**ಸಂಖ್ಯೆ: ಒಇ 192 ಪೊಸಿಪ 2002 (ಭಾಗ–1), ಬೆಂಗಳೂರು, ದಿನಾಂಕ:28ನೇ ಮೇ, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 192 ಪೊಸಿಪ 2002 ದಿನಾಂಕ:18.11.2008ರ 10ನೇ ಸಾಲಿನಲ್ಲಿ "ಕೆ.ಸಿ.ಎಸ್. (ಆರ್.ಪಿ.ಪಿ) ಕಾಯ್ದೆ 1973ರ ಅಧಿನಿಯಮ 4(8)ರ ಪ್ರಕಾರ ಡಿವೈ.ಎಸ್.ಪಿ. ರಿಕ್ತ ಸ್ಥಾನ ಆಧರಿಸಿ ಅರ್ಹತಾ ದಿನಾಂಕವನ್ನು ನೀಡಲಾಗಿದ್ದು, ಅರ್ಹತಾ ದಿನಾಂಕದಿಂದ ವೇತನವನ್ನು ಕಾಲ್ಪನಿಕವಾಗಿ ನಿಗದಿಪಡಿಸಿ ಆರ್ಥಿಕ ಸೌಲಭ್ಯವನ್ನು ಮುಂಬಡ್ತಿ ಪಡೆದ ಹುದ್ದೆಗೆ ವಾಸ್ತವವಾಗಿ ವರದಿ ಮಾಡಿದ ದಿನಾಂಕದಿಂದ ಪಡೆಯುವುದು" ಎಂದು ಹೆಚ್ಚುವರಿಯಾಗಿ ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್.473

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್–65/08, ದಿನಾಂಕ:4ನೇ ಮೇ, 2008**

**ಅರ್ಜಿದಾರರು:**

1) ಸಂಗೊಂಡ ಗೌಂಡರ್ ತಂದೆ: ಮೆರುಮಾಳ ಗೌಂಡರ್, ವಯಸ್ಸು: 54 ವರ್ಷ.
2) ಶ್ರೀಮತಿ ಮಾರೆಮ್ಮಾ ಕೋಂ ಸಂಗೊಂಡ ಗೌಂಡರ್, ವಯಸ್ಸು: 48 ವರ್ಷ.
ವಿಳಾಸ: ವೆಟ್ಟುವನ್ನೂರ್ ವಿಲೇಜ್, ವಟ್ಟಪಾಳ್ಯಮ್

**ವಿರುದ್ಧ**

**ಪ್ರತಿವಾದಿಗಳು:**

1) ಸಿ. ದುರೈಸಾಮಿ ತಂದೆ: ಚಿನ್ನಸಾಮಿ, ನಂ.178, ಕ್ರಿಷ್ಣಪಾಳ್ಯಮ್, ಚಿತ್ತಾನಗರ. ವಿ.ಛಾತ್ರಮ್, ಈರೋಡ, ತಮಿಳನಾಡು, ಈಗಿನ ವಿಳಾಸ: 14/75, ಚಿತ್ತಾನಗರ ಕ್ರಿಷ್ಣಪಾಳ್ಯಂ, ಈರೋಡ–638003, ತಮಿಳುನಾಡು ರಾಜ್ಯ.
2) ದಿ ಬ್ರ್ಯಾಂಚ್ ಮ್ಯಾನೇಜರ್ ನ್ಯಾಷನಲ್ ಇನ್‌ಶ್ಯೂರನ್ಸ್

ವಿಲೇಜ್, ಹುಲಿಕುಂಟೆ ಹೋಬಳಿ, ಒಲಗದಮ್ ಪೋಸ್ಟ್, ಭವಾನಿ ತಾಲ್ಲೂಕು, ಈರೋಡ ಡಿಸ್ಟ್ರಿಕ್ಟ್, ತಮಿಳುನಾಡು ಸ್ಟೇಟ್.

ಕಂ.ಲಿ., ನಂ.73 ಪೆರುಂದರೈ ರೋಡ್, ನಿಯರ್ ಕಲೆಕ್ಟರ್ ಆಫೀಸ್, ಪಿ.ಬಿ.ನಂ.911, ಈರೋಡ, ಪಿನ್–638911.

**ಪ್ರಕಟಣೆ**

ಅರ್ಜಿದಾರರ ಮಗನಾದ ಎಸ್.ಭೂಪತಿ ಇವರು 1ನೇ ಪ್ರತಿವಾದಿ ಲಾರಿ ಸಂಖ್ಯೆ: ಟಿಎಸ್–01–ಎ–8797 ಲಾರಿಯಲ್ಲಿ ಕ್ಲೀನರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:13.08.2008 ಸಂಜೆ 6.00 ಗಂಟೆಗೆ ಶಿರಾದಲ್ಲಿ ಬಟ್ಟೆ ಬಂಡಲ್‌ಗಳನ್ನು ಅನ್‌ಲೋಡು ಮಾಡಲು ಟಾರ್‌ಪಾಲ್ ಮತ್ತು ರೋಪ್‌ಗಳನ್ನು ಬಿಟ್ಟಿ ಬಟ್ಟೆ ಬಂಡಲ್‌ಗಳನ್ನು ಇಳಿಸುವಾಗ ಆಕಸ್ಮಿಕವಾಗಿ ಕಾಲುಜಾರಿ ಕೆಳಗೆ ಬಿದ್ದಿರುವುದರಿಂದ ತಲೆಗೆ ಬಲವಾದ ಏಟಾದ ಪರಿಣಾಮವಾಗಿ ಮೊದಲು ಸರ್ಕಾರಿ ಆಸ್ಪತ್ರೆ ಶಿರಾ ಮತ್ತು ನಂತರ ಸರ್ಕಾರಿ ಆಸ್ಪತ್ರೆ ತುಮಕೂರಿನಲ್ಲಿ ಚಿಕಿತ್ಸೆ ಪಡೆಯುವಾಗ ಚಿಕಿತ್ಸೆ ಫಲಕಾರಿಯಾಗದೇ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**
**ಸಂಖ್ಯೆ: ಕಾಅತು:ಕಾಪಕಾ:ಸಿಆರ್–66/08, ದಿನಾಂಕ:4ನೇ ಮೇ, 2009**

**ಅರ್ಜಿದಾರರು:**

ಸಿ.ಪಿ. ವನಜಾ ವೈಫ್ ಆಫ್ ಲೇಟ್ ಎಮ್.ಆರ್.ಶಾಂತಪ್ಪ, ಮತ್ತಿತರರು.
ವಿಳಾಸ: ಕೇರ್ ಆಫ್, ಟಿ.ಎಸ್. ಲಕ್ಷ್ಮಿನರಸಿಂಹ ಎಸ್.ಬಿ.ಎಂ. ರೋಡ್, ತುರುವೆಕೆರೆ, ತುಮಕೂರು ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**

1) ಡೆಪ್ಯೂಟಿ ಕನ್ಸರ್ವೆಟರ್ ಆಫ್ ಫಾರೆಸ್ಟ್ ಜೆಎಫ್‌ಪಿಎಂ. ವೆಸ್ಟರ್ನ್ ಘಾಟ್ಸ್ ಫಾರೆಸ್ಟ್ರಿ ಪ್ರಾಜೆಕ್ಟ್, ಚಿಕ್ಕಮಗಳೂರು, ಚಿಕ್ಕಮಗಳೂರು ಜಿಲ್ಲೆ.
2) ಕರ್ನಾಟಕ ಗವರ್ನ್‌ಮೆಂಟ್ ಇನ್‌ಶ್ಯೂರೆನ್ಸ್ ಡಿಪಾರ್ಟ್‌ಮೆಂಟ್ ಮೋಟಾರ್ ಇನ್‌ಶೂರೆನ್ಸ್ ಬ್ರ್ಯಾಂಚ್ ಹೈಕೋರ್ಟ್ ಬಿಲ್ಡಿಂಗ್, ಬೆಂಗಳೂರು.

**ಪ್ರಕಟಣೆ**

1ನೇ ಅರ್ಜಿದಾರರ ಯಜಮಾನರಾದ ಮೃತ ಎಮ್.ಆರ್.ಶಾಂತಪ್ಪ ಇವರು 1ನೇ ಪ್ರತಿವಾದಿ ಟಾಟಾಸುಮೋ ಸಂಖ್ಯೆ: ಕೆಎ–18–ಜಿ–276 ವಾಹನದಲ್ಲಿ ಡ್ರೈವರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:28/29.04.2008ರಂದು ಎಮ್.ಸಿ.ಕ್ಲಬ್ ಎದುರುಗಡೆ ಮಧುಗಿರಿ ಕಡೂರು–ಮಂಗಳೂರು ರಸ್ತೆಯಲ್ಲಿ ಆದ ಅಪಘಾತದಿಂದಾದ ಗಾಯಗಳ ಪರಿಣಾಮವಾಗಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**
**ಸಂಖ್ಯೆ: ಕಾಅತು:ಕಾಪಕಾ:ಸಿಆರ್–72/08, ದಿನಾಂಕ:4ನೇ ಮೇ, 2009**

**ಅರ್ಜಿದಾರರು:**

ಶ್ರೀಮತಿ ಕವಿತಾಬಾಯಿ ವೈಫ್‌ಆಫ್ ಲೇಟ್ ಮಂಜಾನಾಯಕ, ವಯಸ್ಸು 25 ವರ್ಷ, ಮತ್ತಿತರರು.
ವಿಳಾಸ: ಯಲ್ಲಾಪುರ, ತುಮಕೂರು ಟೌನ್.

**ವಿರುದ್ಧ**

**ಪ್ರತಿವಾದಿಗಳು:**

1) ಶ್ರೀಮತಿ ಶಿಲಾಶ್ರೀ ವೈಫ್‌ಆಫ್ ಬಿ.ಓ. ರಾಜಕುಮಾರ್, ಶಾಂತಿಲಾಲ್ ಟೆಕ್ಸ್‌ಟೈಲ್ಸ್ ವಾಸ: ಬುಕ್ಕಾಂಬುದಿ ಪೋಸ್ಟ್ ತರಿಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.
2) ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಪಾಂಡುರಂಗ ಕಾಂಪ್ಲೆಕ್ಸ್, ಕೊಲ್ಲಾಪುರಮ್ಮ ಟೆಂಪಲ್ ಸ್ಟ್ರೀಟ್ ಚಿಕ್ಕಮಗಳೂರು.

**ಪ್ರಕಟಣೆ**

1ನೇ ಅರ್ಜಿದಾರರ ಯಜಮಾನರಾದ ಮೃತ ಮಂಜಾನಾಯಕ ಇವರು 1ನೇ ಪ್ರತಿವಾದಿಬಳಿ ಅವರ ಲಾರಿ ಸಂಖ್ಯೆ: ಕೆಎ–18–ಎ–565 ಲಾರಿಯಲ್ಲಿ ಡ್ರೈವರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:18.10.2007ರಂದು 4.45 ಗಂಟೆ ಸಮಯದಲ್ಲಿ ಮಂಚಕಲ್‌ಕುಪ್ಪೆ ಬಿ.ಎಸ್.ಎನ್.ಎಲ್. ಸ್ಥಳದಲ್ಲಿ ಆದ ಅಪಘಾತದಿಂದಾದ ಗಾಯಗಳ ಪರಿಣಾಮವಾಗಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್–73/08, ದಿನಾಂಕ:2ನೇ ಮೇ, 2009**

| ಅರ್ಜಿದಾರರು: | | ಪ್ರತಿವಾದಿಗಳು: |
|---|---|---|
| ಶ್ರೀಮತಿ ಮಾಲಾಬಾಯಿ W/o ಗಂಗಾರಾಮ, ವಯಸ್ಸು: 26 ವರ್ಷ. ಮತ್ತಿತರರು. ವಿಳಾಸ: ಅರಕೆರೆ ಗ್ರಾಮ, ಕಸಬಾ ಹೋಬಳಿ, ತುಮಕೂರು ತಾಲ್ಲೂಕು. | **ವಿರುದ್ಧ** | 1) M.A.A. ಹಾರಿಸ್ ಕರ್ನಾಟಕ ಸ್ಟೋನ್ ಕ್ರಶರ್, ಹೊಸಹಳ್ಳಿ ವಿಲೇಜ್, ಓಬಳಾಪುರ ಪೋಸ್ಟ್, ತುಮಕೂರು ತಾಲ್ಲೂಕು.<br>2) ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಬ್ರ್ಯಾಂಚ್ ಆಫೀಸ್, ತುಮಕೂರು ಶಾಫಿಂಗ್ ಕಾಂಪ್ಲೆಕ್ಸ್, ಬಿ.ಹೆಚ್.ರೋಡ್, ತುಮಕೂರು. |

**ಪ್ರಕಟಣೆ**

1ನೇ ಅರ್ಜಿದಾರರ ಯಜಮಾನರಾದ ಮೃತ ಗಂಗಾರಾಮ ಇವರು 1ನೇ ಪ್ರತಿವಾದಿ ಸ್ಟೋನ್ ಕ್ರಶರ್‌ನಲ್ಲಿ–ಕೂಲಿ ಕಾರ್ಮಿಕನಾಗಿ ಸ್ಟೋನ್‌ಬ್ಲಾಸ್ಟ್ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:20.10.2008ರಂದು 5.00 ಗಂಟೆಗೆ ಸ್ಟೋನ್‌ಬ್ಲಾಸ್ಟ್ ಆದಾಗ ಕಲ್ಲಿನ ತುಂಡುಗಳು ಸಿಡಿದು ಆದ ಅಪಘಾತದಿಂದಾದ ಗಾಯಗಳ ಪರಿಣಾಮವಾಗಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್.417

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್–74/08, ದಿನಾಂಕ:2ನೇ ಮೇ, 2009**

| ಅರ್ಜಿದಾರರು: | | ಪ್ರತಿವಾದಿಗಳು: |
|---|---|---|
| ಶ್ರೀಮತಿ ರತ್ನಮ್ಮ W/o ಲೇಟ್ ನಿಜಗುಣಮೂರ್ತಿ, ವಯಸ್ಸು: 33 ವರ್ಷ. ಮತ್ತಿತರರು. ವಿಳಾಸ: ಉದ್ದೆಹೊಸಕೆರೆ, ನಿಟ್ಟೂರ್ ಹೋಬಳಿ, ಗುಬ್ಬಿ ತಾಲ್ಲೂಕು. | **ವಿರುದ್ಧ** | 1) ಟಿ.ಎಸ್. ರುದ್ರಪ್ರಸಾದ್, ಗುತ್ತಿಗೆದಾರರು, ತಿಪ್ಪೂರು ಪಾಳ್ಯ, ಗುಬ್ಬಿ ತಾಲ್ಲೂಕು.<br>2) ಸಿದ್ರಾಮಯ್ಯ S/o ರುದ್ರಣ, ಗುತ್ತಿಗೆ ಕೆಲಸ, ಉದ್ದೆಹೊಸಕೆರೆ, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ.<br>3) ಶ್ರೀಕಾಂತ ಮೂರ್ತಿ, Ex-Eng. ಕಾವೇರಿ ನೀರಾವರಿ ನಿಗಮ, ತುಮಕೂರು. |

4) ಶಾಂತಕುಮಾರ್ S/o ಮುದ್ದರಂಗಯ್ಯ A.E.E.No.4, ಹೇಮಾವತಿ ಕೆನಾಲ್ ಡಿವಿಜನ್ ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ.

5) ಚಂದ್ರಶೇಖರ್ S/o ಲೇಟ್ ಅಡವಯ್ಯ, J.E.No.4, ಹೇಮಾವತಿ ಕೆನಾಲ್ ಡಿವಿಜನ್ ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ.

**ಪ್ರಕಟಣೆ**

1ನೇ ಅರ್ಜಿದಾರರ ಯಜಮಾನರಾದ ನಿಜಗುಣಮೂರ್ತಿ ಇವರು ಪ್ರತಿವಾದಿಗಳ ಬಳಿ 15ನೇ ಡಿಸ್ಟ್ರಿಬ್ಯೂಷನ್ ಹೇಮಾವತಿ ಚಾನಲ್ ಕಲವರ್ಟ್ (ಬ್ರಿಡ್ಜ್) ನಿರ್ಮಾಣದ ಕೂಲಿಕಾರ್ಮಿಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:02.06.2008 ರಂದು ಸಾಯಂಕಾಲ 5–45 ಗಂಟೆ ಸಮಯದಲ್ಲಿ ನಿರ್ಮಾಣ ಹಂತದ ಬ್ರಿಡ್ಜ್ ಕುಸಿದು ಆದ ಅಪಘಾತದಿಂದಾದ ಗಾಯಗಳ ಪರಿಣಾಮವಾಗಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್–75/08, ದಿನಾಂಕ:2ನೇ ಮೇ, 2009**

**ಅರ್ಜಿದಾರರು:**

1) ದೊಡ್ಡಯ್ಯ S/o ಲೇಟ್ ಕೆಂಪಯ್ಯ, ವಯಸ್ಸು:48 ವರ್ಷ.

2) ಶ್ರೀಮತಿ ನಂಜಮ್ಮ W/o ದೊಡ್ಡಯ್ಯ, ವಯಸ್ಸು:43 ವರ್ಷ.

ವಿಳಾಸ: ಹಲಸಿನ ನಾಗೇನಹಳ್ಳಿ, ಎ.ಕೆ. ಕಾಲೋನಿ, ನಿಟ್ಟೂರು ಹೋಬಳಿ, ಗುಬ್ಬಿ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:**

1) ಟಿ.ಎಸ್. ರುದ್ರಪ್ರಸಾದ್, ಗುತ್ತಿಗೆದಾರರು, ತಿಪ್ಪೂರು ಪಾಳ್ಯ, ಗುಬ್ಬಿ ತಾಲ್ಲೂಕು.

2) ಸಿದ್ರಾಮಯ್ಯ S/o ರುದ್ರಣ್ಣ, ಗುತ್ತಿಗೆ ಕೆಲಸ, ಉದ್ದೆಹೊಸಕೆರೆ, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ.

3) ಶ್ರೀಕಾಂತ ಮೂರ್ತಿ, Ex-Eng. ಕಾವೇರಿ ನೀರಾವರಿ ನಿಗಮ, ತುಮಕೂರು.

4) ಶಾಂತಕುಮಾರ್ S/o ಮುದ್ದರಂಗಯ್ಯ A.E.E.No.4, ಹೇಮಾವತಿ ಕೆನಾಲ್ ಡಿವಿಜನ್ ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ.

5) ಚಂದ್ರಶೇಖರ್ S/o ಲೇಟ್ ಅಡವಯ್ಯ, J.E.No.4, ಹೇಮಾವತಿ ಕೆನಾಲ್ ಡಿವಿಜನ್ ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ.

**ಪ್ರಕಟಣೆ**

ಅರ್ಜಿದಾರರ ಮಗನಾದ ಮೃತ ನರಸಿಂಹಯ್ಯ ಇವರು ಪ್ರತಿವಾದಿಗಳ ಬಳಿ 15ನೇ ಡಿಸ್ಟ್ರಿಬ್ಯೂಷನ್ ಹೇಮಾವತಿ ಚಾನಲ್ ಕಲವರ್ಟ್ (ಬ್ರಿಡ್ಜ್) ನಿರ್ಮಾಣದಲ್ಲಿ ಕೂಲಿಕಾರ್ಮಿಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:02.06.2008 ರಂದು ಸಾಯಂಕಾಲ 5–45 ಗಂಟೆ ಸಮಯದಲ್ಲಿ ನಿರ್ಮಾಣ ಹಂತದ ಬ್ರಿಡ್ಜ್ ಕುಸಿದು ಆದ ಅಪಘಾತದಿಂದಾದ ಗಾಯಗಳ ಪರಿಣಾಮವಾಗಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ
## ಪ್ರಕಟಣೆ
### ಸಂಖ್ಯೆ: ಕಾನಿಇಂ/ಸಕಾನಿಇಂ/ಟಿ–187/592–94, ದಿನಾಂಕ:9ನೇ ಜೂನ್, 2009

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ವಿದ್ಯುತ್ ಪೂರೈಕೆ ಕಾಯ್ದೆ 2003, ಸೆಕ್ಷನ್ 67ರ ಅಡಿಯಲ್ಲಿ ಒಂದು ಯೋಜನೆಯನ್ನು ರೂಪಿಸಿದೆ ಮತ್ತು ಇದೇ ಕಾಯ್ದೆ ಸೆಕ್ಷನ್ 67(2) (ಸಿ)ರ ಅನ್ವಯ ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಯೋಜನೆಯನ್ನು ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರೆ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ:

**ಕೆಲಸದ ಹೆಸರು:** ಹಾಲಿ ಇರುವ 66 ಕೆ.ವಿ. ಐ ಪಿ ಸಿ ಎಲ್–ಸಕಲೇಶಪುರ ದ್ವಿವಿದ್ಯುತ್ ಮಾರ್ಗದಿಂದ 66 ಕೆ.ವಿ. ಏಕ ವಿದ್ಯುತ್ ಮಾರ್ಗವನ್ನು ಮೆ: ಮೈಸೂರು ಮೆರ್ಕ್ಯಂಟೈಲ್ ಕಂಪನಿ ಲಿಮಿಟೆಡ್‌ರವರು ಯೆತ್ತಿನಹೋಳೆಯಲ್ಲಿ ಹೊಸದಾಗಿ ನಿರ್ಮಿಸುತ್ತಿರುವ ವಿದ್ಯುತ್ ಉಪಕೇಂದ್ರಕ್ಕೆ ನಿರ್ಮಿಸಿರುವ 3.53 ಕಿ.ಮೀ. ಉದ್ದದ 66 ಕೆ.ವಿ. ಏಕ ವಿದ್ಯುತ್ ಮಾರ್ಗ.

**ಉದ್ದೇಶ:** ಮೆ: ಮೈಸೂರು ಮೆರ್ಕ್ಯಂಟೈಲ್ ಕಂಪನಿ ಲಿಮಿಟೆಡ್‌ರವರು ಯೆತ್ತಿನಹೋಳೆಯಲ್ಲಿ ಹೊಸದಾಗಿ ನಿರ್ಮಿಸುತ್ತಿರುವ ವಿದ್ಯುತ್ ಉಪ ಕೇಂದ್ರಕ್ಕೆ ವಿದ್ಯುತ್ ಸರಬರಾಜು ಮಾಡುವ ಸಲುವಾಗಿ.

**ಹಾದು ಹೋಗುವ ಪ್ರದೇಶ:** ಮರ್ಡ್ಗಳ್ಳಿ, ಕ್ಯಾನಹಳ್ಳಿ, ಯತ್ತಿನಹಳ್ಳಿ.

**ಅಂದಾಜು ವೆಚ್ಚ:** ರೂ.107.43 ಲಕ್ಷಗಳು.

ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಅಧಿನಿಯಮ 1885(13)ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು, ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು. ಈ ಯೋಜನೆಯ ಬಗೆಗೆ ಏನಾದರು ಆಕ್ಷೇಪಣೆಗಳು ಇದ್ದಲ್ಲಿ ಅದನ್ನು ಈ ಪ್ರಕಟಣೆಯ ದಿನಾಂಕದಿಂದ ಎರಡು ತಿಂಗಳೊಳಗಾಗಿ ಕಾರ್ಯನಿರ್ವಾಹಕ ಇಂಜಿನಿಯರ್(ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಹಾಸನ ಇವರಿಗೆ ಸಲ್ಲಿಸಬೇಕಾಗಿ ವಿನಂತಿ.

ಕಾರ್ಯನಿರ್ವಾಹಕ ಇಂಜಿನಿಯರ್ (ವಿ),
ಬೃಕಾವಿ/ ಕವಿಪ್ರನಿನಿ/ ಹಾಸನ.

ಪಿ.ಡಿ.33

## KARNATAKA POWER TRANSMISSION CORPORATION LTD.,
## NOTIFICATION
### No.EEE/BMWSD/ AEE(O)/ Date:

The Karnataka power Transmission Corporation Ltd., have formulated a scheme under section-67 (2)(c) of the Electricity Supply Act 2003 and the same is here with published in pursuance of section 67(ii) of the said Act. For information of the general public particulars of the scheme are as follows.

**Name of the Project:**

- Suryanagar 66 KV Line: Construction of 66KV LILO line from tap point near 78KV corridor of one circuit of Yerrandanahalli Anekal line to the proposed 66KV station at Suryanagar project of KHB by drake conductor with narrow base Leela venture type tower along the 78KV corridor running in the premises of Suryanagar project of KHB, Anekal Taluk, in Bangalore Urban District for a distance of 2.10 Kms.

**Salient Features:** To improve reliability of power supply in and around Suryanagar.

**Line passes through these villages:**

- Hinnakki Limits, Farm Mechanization Institute limits, Ramakrishnapura, Iggalur, Banahalli & Suryanagar Areas of Anekal Taluk.

**Total estimated Cost (as per DPR):** Rs.729.69 Lakhs.

The KPTCL shall have and shall reserve all power & rights to execute the above projects under Indian Telegraphic rule 1885 (13) Part-3 Clause-II. If there is any objections from the General Public may be brought to the Notice of the Executive Engineer Elect. Major Works South Division, KPTCL, A.R. Circle, Bangalore-09, within 15 days from the date of publication for consideration by Corporation.

**M. MALLIKARJUNA REDDY**
Executive Engineer Elec. MWSD,
KPTCL, A.R. Circle, Bangalore-9.

PD-34

**ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರ ನಡವಳಿಗಳು**

**ವಿಷಯ:** ತುಮಕೂರು ತಾಲ್ಲೂಕು, ಶಿರಾ ಟೌನಿನ ಭವಾನಿ ನಗರ–02 ಕೊಳಚೆ ಪ್ರದೇಶ ಬಡಾವಣೆಯನ್ನು ಅಧಿನಿಯಮ (3)ರಡಿಯಲ್ಲಿ ಕೊಳಚೆ ಪ್ರದೇಶ ಎಂದು ಘೋಷಿಸುವ ಬಗ್ಗೆ.

**ಉಲ್ಲೇಖ:**1) ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ಇವರ ಪತ್ರ ಸಂಖ್ಯೆ: ಕ.ಕೊ.ನಿ.ಮ:ರೆ:ಸಿ:ಘೋ/01–02/1333 ದಿನಾಂಕ:06.01.2009.

2) ಸಹಾಯಕ ಕಾರ್ಯಪಾಲಕ ಅಭಿಯಂತರರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ನಂ.3 ಉಪವಿಭಾಗ, ತುಮಕೂರು ರವರ ಪತ್ರ:ಕಕೊನಿಮತುಉವಿ/ಶಿರಾ/ಭವಾನಿನಗರ/2009–10/15 ದಿನಾಂಕ:19.05.2009.

**ಪ್ರಸ್ತಾವನೆ:**

ತುಮಕೂರು ಜಿಲ್ಲೆ ಶಿರಾ ನಗರದ ಭವಾನಿ ನಗರ–02 ಬಡಾವಣೆಯಲ್ಲಿ ವಾಸದ ಮನೆಗಳು, ಗುಡಿಸಲುಗಳು ಒತ್ತೊತ್ತಾಗಿದ್ದು, ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲತೆಯುಂಟಾಗಿದ್ದು ಹಾಲಿ ಇರುವ ಗುಡಿಸಲುಗಳು, ಮನೆಗಳು, ದುರಸ್ತಿಯಲ್ಲದೇ ಕುಡಿಯುವ ನೀರು, ರಸ್ತೆಗಳು, ರಸ್ತೆಬದಿ, ದೀಪಗಳು, ಚರಂಡಿಗಳು ಮತ್ತು ಸಾರ್ವಜನಿಕ ಶೌಚಾಲಯ ಮುಂತಾದ ಮೂಲಭೂತವಾದ ಸೌಕರ್ಯಗಳು ಇಲ್ಲದ ಪ್ರಯುಕ್ತ ಈ ಪ್ರದೇಶದಲ್ಲಿ ಅನಾರೋಗ್ಯಕರ ವಾತಾವರಣ ಉಂಟಾಗಿರುವುದಾಗಿಯೂ, ಈ ಪ್ರದೇಶವನ್ನು ಕೊಳಚೆ ನಿರ್ಮೂಲನಾ ಮಂಡಳಿಯ ವತಿಯಿಂದ ಅಭಿವೃದ್ಧಿಗೊಳಿಸುವ ಒಂದು ಸಾರ್ವಜನಿಕ ಉದ್ದೇಶ ಹೊಂದಿ ಈ ಪ್ರದೇಶವನ್ನು ಕೊಳಚೆ ಪ್ರದೇಶ ಎಂದು ಘೋಷಣೆ ಮಾಡಲು ಉದ್ದೇಶಿಸಿ ಉಲ್ಲೇಖ (1)ರ ಪತ್ರದನ್ವಯ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಾಯಕ ಕಾರ್ಯಪಾಲಕ ಅಭಿಯಂತರರು ತುಮಕೂರು ಇವರು ಸ್ಥಳ ಪರಿಶೀಲಿಸಿ, ಸದರಿ ಪ್ರದೇಶದ ನಕ್ಷೆ ಮತ್ತು ಚಕ್ಕುಬಂದಿಗಳನ್ನು ಪರಿಶೀಲಿಸಿ ಈ ಬಗ್ಗೆ ಶಿರಾ ನಗರಸಭೆ ಪೌರಾಯುಕ್ತರು ಇವರಿಂದ ನಿರಾಕ್ಷೇಪಣಾ ಪತ್ರವನ್ನು ಪಡೆದುಕೊಂಡು ಈ ಪ್ರದೇಶವು ಶಿರಾ ನಗರಸಭೆ ವ್ಯಾಪ್ತಿಯಲ್ಲಿರುವುದನ್ನು ಖಚಿತಪಡಿಸಿಕೊಂಡು ಈ ಪ್ರದೇಶವನ್ನು ಕೊಳಚೆ ಪ್ರದೇಶ ಎಂದು ಅಧಿಸೂಚನೆ ಹೊರಡಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಈ ಬಗ್ಗೆ ದಿನಾಂಕ:08.12.2008 ರಂದು ಸ್ಥಳ ತನಿಖೆ ನಡೆಸಿ ಇದರ ಪ್ರಸ್ತಾವನೆಯನ್ನು ಪರಿಶೀಲಿಸಿ, ಯುಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಕ್ರಮಾಂಕ ಡಿ.ಯು.ಡಿ.ಸಿ ಇತರೆ/ವಿವ/12/09–10, ತುಮಕೂರು ದಿನಾಂಕ:3ನೇ ಜೂನ್, 2009**

ತುಮಕೂರು ಜಿಲ್ಲೆಯ ಶಿರಾ ನಗರ ವ್ಯಾಪ್ತಿಯಲ್ಲಿ ಬರುವ ಭವಾನಿ ನಗರ–02 ಬಡಾವಣೆ ಪ್ರದೇಶವು ಕೊಳಚೆ ಪ್ರದೇಶ ಎಂದು ಕಂಡು ಬಂದಿರುವುದರಿಂದ ಈ ಪ್ರದೇಶವನ್ನು ಕೊಳಚೆ ನಿರ್ಮೂಲನಾ ಮಂಡಳಿಯು ಅಭಿವೃದ್ಧಿ ಪಡಿಸುವ ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಈ ಪ್ರದೇಶಗಳನ್ನು ಕೊಳಚೆ ಪ್ರದೇಶ ಎಂದು ಕರ್ನಾಟಕ ಕೊಳಚೆ ನಿರ್ಮೂಲನ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯಿದೆ 1979ರ ಕಲಂ (3)ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸಿ ಶಿರಾ ನಗರಸಭೆ ವ್ಯಾಪ್ತಿಯ ಭವಾನಿ ನಗರ–02 ಕೊಳಚೆ ಪ್ರದೇಶವನ್ನು ಕೊಳಚೆ ಪ್ರದೇಶ ಎಂದು ಘೋಷಿಸಿ ಪ್ರಾರಂಭಿಕ ಅಧಿಸೂಚನೆಯನ್ನು ಹೊರಡಿಸಲಾಗಿದೆ ಈ ಬಗ್ಗೆ ಯಾವುದೇ ಆಕ್ಷೇಪಣೆಗಳಿದ್ದಲ್ಲಿ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಈ ಕಛೇರಿಗೆ ಸಲ್ಲಿಸಬಹುದಾಗಿದೆ.

ಜಿಲ್ಲಾಧಿಕಾರಿಗಳು,
ತುಮಕೂರು ಜಿಲ್ಲೆ, ತುಮಕೂರು.

**OFFICE OF THE DEPUTY COMMISSIONER, TUMKUR DISTRICT, TUMKUR**

**Preliminary Notification DUDC/MISC/CR/12/09-10, Dated:3rd June, 2009**

Whereas the Deputy Commissioner. Tumkur is satisfied.

I. That the area situation, S. Nos. P.T.S. Nos. Extent and boundaries and other details of which are specified in schedule below situated within the limits of City Municipal Council, Sira, Tumkur District, are a source of danger to the health, safety and convenience of the public of the area and of its neighborhood by reason of the said area being insanitary, squalid and over crowded.

II. The buildings in the said area used or intended to be used for human habitation area over crowded and unfit for human habitation for want of repair, stability, freedom from damp: natural light and air, water supply, drainage and sanitary convenience:

It is hereby notified for the information of all persons interested in the said area that in exercise of the powers delegated in Government notification No.HUD 49 MCS 85 Dated:17th April 1986 to exercise powers under section3 of the Karnataka Slum areas (Improvement and clearance) Act, 1973, Karnataka Act 33 of 1974 to declare the said area to be a slum area.

Any representation against the proposed action may be made to the Deputy Commissioner, Tumkur District, Tumkur within 15 days from the date of publication of this notification.

**Schedule**

| Sl. No. | Name of the location of the slum | Name of the owner | Survey No. | Segment | Extent | Boundaries | |
|---|---|---|---|---|---|---|---|
| 1. | Bhavaninagar-02 Sira | C.M.C. Sira. | 56/1 | 1 | A G 2.00 | East | Agricultural Land |
| | | | | | | West | Maszid |
| | | | | | | North | Agricultural Land |
| | | | | | | South | Agricultural Land |
| | | | | 2 | A G 0. 25 | East | Vacant land |
| | | | | | | West | Road |
| | | | | | | North | Maszid |
| | | | | | | South | Agricultural Land |

Deputy Commissioner,

PR-506 Tumkur District, Tumkur.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on 'Isopropy1 alcohol'.

**Ref:** 1) Application Dated:10.02.2008 of M/s G.A.G. Trading Company, No.320, Avenue Road, Bangalore-560002.

2) Proceedings of CCT (K), Bangalore vide No.CLR.CR.06/07-08, Dated:04.06.2008.

In its application Dated:10.02.2008 cited (1) above, M/s G.A.G. Trading Company, No.320, Avenue Road, Bangalore-560002 had sought clarification regarding the rate of tax applicable on 'Isopropyl alcohol'. Pursuant to the same, it was clarified in the proceedings cited at ref. (2) above that 'Isopropy1 alcohol' was taxable at 12.5% under Section 4(1)(b) of the Karnataka Value Added Tax Act, 2003.

2. On a re-examination, it is seen that 'isopropyl alcohol' has been specified in Serial No.167 of the table of the notification No.FD 197 CSL 2005 (6), Dated:30.04.2005 in which industrial inputs liable to tax at 4% under entry 51 of the III schedule to the Karnataka Value Added Tax Act, 2003,have been notified.

3. Hence the following revised clarification is issued.

**Clarification No. CLR.CR.06/08-09, Dated:6$^{th}$ June, 2009**

In modification of the clarification issued in No.CLR.CR.06/07-08, Dated:04.06.2008, it is hereby clarified that 'Isopropyl alcohol' is taxable at 4% in terms of the notification No.FD 197 CSL 2005(6), Dated:30.04.2005 read with entry 51 of the III Schedule to the Karnataka Value Added Tax Act, 2003.

**B.A. HARISH GOWDA**

PR-512 Commissioner of Commercial Taxes,

(Karnataka), Bangalore.

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬಹುಮಹಡಿಗಳ ಕಟ್ಟಡ, ಬೆಂಗಳೂರು**

**ಸಂಖ್ಯೆ: ಆಸಾನಿ:271:ಆಡಳಿತ(2) 2009/ 10448–87, ಬೆಂಗಳೂರು, ದಿನಾಂಕ:11ನೇ ಜೂನ್, 2009**

**ವಿಷಯ:** ಶ್ರೀ ಆರ್.ಬಿ. ಜತನ್, ಸಾಂಖ್ಯಿಕ ನಿರೀಕ್ಷಕರು, ತಾಲ್ಲೂಕು ಕಛೇರಿ, ಹುಬ್ಬಳ್ಳಿ (ಧಾರವಾಡ ಜಿಲ್ಲೆ) ಇವರ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವ ಕುರಿತು.

**ಉಲ್ಲೇಖ:** ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಧಾರವಾಡ ಇವರ ಅರೆ ಸರ್ಕಾರಿ ಪತ್ರದ ಸಂಖ್ಯೆ: ಜಿಸಂಧಾ:4/ಆಡಳಿತ–1/ವರ್ಗಾವಣೆ:09–10/807, ದಿನಾಂಕ:03.05.2009/05.06.2009 ರೊಂದಿಗೆ ಲಗತ್ತಿಸಲಾದ ತಹಸೀಲ್ದಾರ, ಹುಬ್ಬಳ್ಳಿ ತಾಲ್ಲೂಕು, ಹುಬ್ಬಳ್ಳಿ ಇವರ ಅರೆ ಸರ್ಕಾರಿ ಪತ್ರದ ಸಂಖ್ಯೆ: ಸಿಬ್ಬಂದಿ/ವಹಿ/7/09–10, ದಿನಾಂಕ:28.05.2009.

**ಪ್ರಸ್ತಾವನೆ:**

ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಧಾರವಾಡ ಇವರಿಗೆ ವಿಳಾಸಿಸಲಾದ ತಹಸೀಲ್ದಾರರು, ಹುಬ್ಬಳ್ಳಿ ತಾಲ್ಲೂಕು, ಹುಬ್ಬಳ್ಳಿ ಇವರ ಅರೆ ಸರ್ಕಾರಿ ಪತ್ರದ ಸಂಖ್ಯೆ: ಸಿಬ್ಬಂದಿ/ವಹಿ/7/09–10, ದಿನಾಂಕ:28.05.2009ರಲ್ಲಿ ಈ ನಿರ್ದೇಶನಾಲಯದ ಸಾಂಖ್ಯಿಕ ನಿರೀಕ್ಷಕರು ವೃಂದದ ಶ್ರೀ ಆರ್.ಬಿ. ಜತನ್, ಸಾಂಖ್ಯಿಕ ನಿರೀಕ್ಷಕರು, ತಾಲ್ಲೂಕು ಕಛೇರಿ, ಹುಬ್ಬಳ್ಳಿ ಇವರು "ದಿನಾಂಕ:01.03.2000 ರಿಂದ ತಾಲ್ಲೂಕು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅವರಿಗೆ ವಹಿಸಲಾದ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸುತ್ತಿಲ್ಲವೆಂದೂ, ಸದರಿ ಸಾಂಖ್ಯಿಕ ನಿರೀಕ್ಷಕರಿಗೆ ಮೌಖಿಕವಾಗಿ ಸೂಚಿಸಲಾಗುತ್ತಿದ್ದರೂ ಕೂಡ ಕರ್ತವ್ಯ ನಿರ್ವಹಣೆಯಲ್ಲಿ ಸುಧಾರಣೆಯಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಅವರ ಕರ್ತವ್ಯ ನಿರ್ವಹಣೆಯಲ್ಲಿ ಸುಧಾರಣೆಯಾಗುವಂತೆ, ಸದರಿಯವರಿಗೆ ದಿನಾಂಕ:06.10.2008ರಂದು ಒಂದು ಜ್ಞಾಪನ ನೀಡಲಾಗಿದ್ದರೂ, ಆ ಜ್ಞಾಪನಕ್ಕೆ ಅವರು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ ಹಾಗೂ ದಿನಾಂಕ:17.04.2009ರಂದು ಅವರು ನಿರ್ವಹಿಸುತ್ತಿರುವ ಸಂಕಲನಗಳ (ಕಡತಗಳು, ಪತ್ರ ವ್ಯವಹಾರಗಳು, ಇತ್ಯಾದಿ) ತಪಾಸಣೆ ಕೈಗೊಂಡು, ತಪಾಸಣಾ ಸಮಯದಲ್ಲಿ ಕಂಡು ಬಂದಿದ್ದ ಆಕ್ಷೇಪಣೆ/ ಲೋಪದೋಷಗಳನ್ನೊಳಗೊಂಡ ವರದಿಗೆ ಸಂಬಂಧಿಸಿದಂತೆ, ಅವರ ಅನುಪಾಲನಾ ವರದಿಯನ್ನು 3 ದಿನಗಳಲ್ಲಿ ಸಲ್ಲಿಸುವಂತೆ ತಿಳಿಸಲಾಗಿದ್ದರೂ, ಸದರಿ ಸಾಂಖ್ಯಿಕ ನಿರೀಕ್ಷಕರು ಅವರ ವರದಿಯನ್ನು ಸಲ್ಲಿಸದೇ ಇದ್ದುದರಿಂದ, ಅವರಿಗೆ ಪುನಃ ದಿನಾಂಕ:04.05.2009ರಂದು ನೀಡಿದ್ದ ನೆನಪೋಲೆಗೆ ಕೂಡ ಯಾವುದೇ ವಿವರಣೆ ನೀಡಿಲ್ಲವಾದ್ದರಿಂದ ಸದರಿ ಸಾಂಖ್ಯಿಕ ನಿರೀಕ್ಷಕರು ಮೇಲಾಧಿಕಾರಿಗಳ ಆದೇಶವನ್ನು ಪಾಲಿಸದೇ ಇರುವುದು ಸ್ಪಷ್ಟವಾಗಿರುತ್ತದೆ" ಎಂದು ತಹಶೀಲ್ದಾರರು, ಹುಬ್ಬಳ್ಳಿ ತಾಲ್ಲೂಕು ಇವರು ಅವರ ಅದೇ ಪತ್ರದಲ್ಲಿ ವರದಿ ನೀಡಿರುತ್ತಾರೆ.

ತಹಸೀಲ್ದಾರರು ಹುಬ್ಬಳ್ಳಿ ತಾಲ್ಲೂಕು, ಹುಬ್ಬಳ್ಳಿ ಇವರ ವರದಿಯನ್ನು ಪರಿಶೀಲಿಸಲಾಗಿ, ಈ ನಿರ್ದೇಶನಾಲಯದ ಸಾಂಖ್ಯಿಕ ನಿರೀಕ್ಷಕರ ವೃಂದದ ಸಮೂಹ 'ಸಿ' ನೌಕರರಾದ ಶ್ರೀ ಆರ್.ಬಿ. ಜತನ್, ಇವರು ಅವರ ಕರ್ತವ್ಯ ನಿರ್ವಹಣೆಯಲ್ಲಿ ಬೇಜವಾಬ್ದಾರಿತನ ಮತ್ತು ಕರ್ತವ್ಯ ಲೋಪವೆಸಗಿ, ಸಮೂಹ "ಸಿ" ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯ ವರ್ತನೆ ಎಂದು ಪರಿಗಣಿಸಿ, ಅವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಕಛೇರಿ ಆದೇಶದ ಸಂಖ್ಯೆ: 99: ಆಡಳಿತ:2009–10**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಪರಿಗಣಿಸಿ, ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಮತ್ತು ಶಿಸ್ತು ಪ್ರಾಧಿಕಾರವಾದ ನಾನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ, 1957ರ ನಿಯಮ:10(1–ಎ) ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ಬಿ. ಜತನ್, ಸಾಂಖ್ಯಿಕ ನಿರೀಕ್ಷಕರು, ತಾಲ್ಲೂಕು ಕಛೇರಿ, ಹುಬ್ಬಳ್ಳಿ, (ಧಾರವಾಡ ಜಿಲ್ಲೆ) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಏರ್ಪಡಿಸುವುದನ್ನು ಕಾಯ್ದಿರಿಸಿ ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1957ರ ನಿಯಮ:98(1), 98(2) ಮತ್ತು ನಿಯಮ:104(2)ರಲ್ಲಿನ ಷರತ್ತುಗಳನ್ನು ಪೂರೈಸಿದಲ್ಲಿ, ಸದರಿ ಅಮಾನತ್ತುಗೊಂಡ ಸಾಂಖ್ಯಿಕ ನಿರೀಕ್ಷಕರಿಗೆ ಅಮಾನತ್ತು ಅವಧಿಯಲ್ಲಿ ಜೀವನ ನಿರ್ವಹಣಾ ಭತ್ಯೆಯನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಧಾರವಾಡ ಇವರ ಕಛೇರಿಯಿಂದ ನೀಡಬಹುದಾಗಿದೆ.

**ಹೆಚ್.ಇ. ರಾಜಶೇಖರಪ್ಪ**

ಪಿ.ಆರ್.508

ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರ,
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ.

**ಕರ್ನಾಟಕ ಲೋಕಸೇವಾ ಆಯೋಗ**

**ವಿಷಯ:** 2008ನೇ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಚಿತ್ರದುರ್ಗ ಕೇಂದ್ರದಲ್ಲಿ ಎಸಗಿರುವ ದುರಾಚಾರ ಪ್ರಕರಣಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:** 1) ಇಪ(1) 1629/2008–09/ಪಿಎಸ್‌ಸಿ, ದಿನಾಂಕ:02.03.2009.

2) ಇಪ (1)850/2009–10/ಪಿಎಸ್‌ಸಿ, ದಿನಾಂಕ:30.04.2009.
3) ದಿನಾಂಕ:11.05.2009ರ ಆರೋಪಿ ಅಭ್ಯರ್ಥಿಯ ಸಮಜಾಯಿಷಿ.
4) ಆಯೋಗದ ನಡವಳಿ ದಿನಾಂಕ:25.05.2009.

**ಪ್ರಸ್ತಾವನೆ:**

ಆಯೋಗವು ದಿನಾಂಕ:02.02.2009ರಂದು ಚಿತ್ರದುರ್ಗ ಕೇಂದ್ರದಲ್ಲಿ ನಡೆಸಿದ 2008ನೇ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಜನರಲ್ ಲಾ ಭಾಗ–2ರ ವಿಷಯದ ಅಭ್ಯರ್ಥಿಯಾದ ಶ್ರೀ ಬಿ. ರವಿಕುಮಾರ್, ದ್ವಿತೀಯ ದರ್ಜೆ ಸಹಾಯಕರು, ಸರ್ಕಾರಿ ಪದವಿ ಪೂರ್ವ ಕಾಲೇಜ್, ಪರಶುರಾಮಪುರ, ಚಳ್ಳಕೆರೆ (ತಾ), ಚಿತ್ರದುರ್ಗ ಜಿಲ್ಲೆ, (ನೋ.ಸಂ:42239) ಇವರು ಪರೀಕ್ಷೆಗೆ ಮದ್ಯಪಾನ ಮಾಡಿ ಬಂದು, ಗಲಾಟೆ ಮಾಡಿ ಅಕ್ಕಪಕ್ಕದ ಅಭ್ಯರ್ಥಿಗಳನ್ನು ನಿಂದಿಸಿ ಪರೀಕ್ಷಾ ಕಾರ್ಯಗಳಿಗೆ ಭಂಗ ಉಂಟು ಮಾಡಿರುವ ಬಗ್ಗೆ ಪರೀಕ್ಷಾ ಮೇಲ್ವಿಚಾರಕರು ದೂರನ್ನು ಸಲ್ಲಿಸಿದ್ದು, ಈ ಸಂಬಂಧ ಆರೋಪಿತರಿಗೆ ಕ್ರಮಸಂಖ್ಯೆ (1)ರಲ್ಲಿ ಮೇಲೆ ಓದಲಾದ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿದ್ದು, ಕ್ರಮಸಂಖ್ಯೆ (2)ರಲ್ಲಿ ಆರೋಪಿ ಅಭ್ಯರ್ಥಿಯು ತನ್ನ ಆರೋಪವನ್ನು ಒಪ್ಪಿಕೊಂಡಿದ್ದು, ಆ ಪ್ರಯುಕ್ತ ಕ್ರಮಸಂಖ್ಯೆ (4)ರಲ್ಲಿ ಓದಲಾದ ಆಯೋಗದ ನಡವಳಿ ದಿನಾಂಕ:25.05.2009ರ ಅನ್ವಯ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ:

**ಆದೇಶ ಸಂಖ್ಯೆ: ಇಪ (1) 909/ 09–10/ಪಿಎಸ್‌ಸಿ, ಬೆಂಗಳೂರು, ದಿನಾಂಕ:9ನೇ ಜೂನ್, 2009**

1965ರ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಾವಳಿ ನಿಯಮ 14 ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನ ಪತ್ರಸಂಖ್ಯೆ: ಆಡಳಿತ 398/93–94/ಪಿಎಸ್‌ಸಿ ದಿನಾಂಕ:14.07.1993 ಅಧಿಸೂಚನೆಯಂತೆ, ಸದರಿ ಇಲಾಖಾ ಪರೀಕ್ಷೆಯ ಅಭ್ಯರ್ಥಿಯಾದ ಶ್ರೀ ಬಿ. ರವಿಕುಮಾರ್, ದ್ವಿತೀಯ ದರ್ಜೆ ಸಹಾಯಕ, ಸರ್ಕಾರಿ ಪದವಿ ಪೂರ್ವ ಕಾಲೇಜ್, ಪರಶುರಾಮಪುರ, ಚಿತ್ರದುರ್ಗ ಜಿಲ್ಲೆ ಇವರ ಮೇಲಿನ ಆರೋಪ ಸಾಬೀತಾಗಿರುವುದರಿಂದ 2008ನೇ ದ್ವಿತೀಯ ಅಧಿವೇಶನದ ಅಭ್ಯರ್ಥಿತನವನ್ನು ರದ್ದುಪಡಿಸಿದೆ. ಇನ್ನು ಮುಂದೆ ಈ ಅಭ್ಯರ್ಥಿಯು ಆಯೋಗದಿಂದ ನಡೆಸಲಾಗುವ ಇಲಾಖಾ ಪರೀಕ್ಷೆಗಳಿಗೆ ಖಾಯಂ ಹಾಜರಾಗದಂತೆ ದಂಡನೆಯನ್ನು ವಿಧಿಸಿ, ಆದೇಶ ಹೊರಡಿಸಿದೆ.

ಆಯೋಗದ ಆದೇಶದ ಮೇರೆಗೆ,
**ವಿ.ಬಿ. ಪಾಟೀಲ್**
ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.513

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding applicability of VAT on customized software.

**Ref:** Application Dated:28.04.2009 of M/s Tejas Networks Ltd., # 58, 1st Main Road, J.P. Nagar, 3rd Phase, Bangalore-560078.

In its application cited above, M/s Tejas Networks Ltd., # 58, 1st Main Road, J.P. Nagar, 3rd Phase, Bangalore-560078, has sought clarification regarding applicability of VAT on customized software.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.14/09-10, Dated:8th June, 2009**

It is hereby clarified that sale of customized software is taxable at 4% VAT in terms of Notification No.FD 116 CSL 2006 (9), Dated:31.03.2006.

**B.A. HARISH GOWDA**
Commissioner of Commercial Taxes,
(Karnataka), Bangalore.

PR-519

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on ‘fly ash bricks, concrete window, door frames, curb stones and pavers.

**Ref:** Application Dated:23.03.2009 of Sri Muniyappa, Proprietor, M/s Laxmi Venkateshwara Cement Bricks, C.B. Pura Road, Vijayapura-562135, Bangalore Rural District.

In its application cited above, Sri Muniyappa, Proprietor, M/s Laxmi Venkateshwara Cement Bricks, C.B. Pura Road, Vijayapura-562135, Bangalore Rural District, has sought clarification regarding the rate of tax applicable on ‘fly ash bricks, concrete window, door frames, curb stones and pavers’.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.285/08-09, Dated:7th May, 2009**

It is hereby clarified that the rates of tax applicable on the following goods is as under.

| Sl. No. | Commodity | Rate of tax/ Section |
|---|---|---|
| 1. | Fly ash bricks | 4% under entry Sl.No.2 of III Schedule to the KVAT Act, 2003. |
| 2. | Concrete window, door frames, curb stones and pavers. | 12.5% under Section 4 (1)(b) of the KVAT Act, 2003. |

**B.A. HARISH GOWDA**

PR-462

Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on ‘supply of plastic alphabets and puzzles in Kannada and English to Government schools and rubber alphabets for blind students’.

**Ref:** Application Dated:25.03.2009 of Sri G. Nataraj, Partner M/s Bhagyam Binding Works, # 25/1, 1st Main Road, 1st Cross, New Timber Yard Layout, Mysore Road, Bangalore-560026.

In his application cited above, Sri G. Nataraj, Partner M/s Bhagyam Binding Works, # 25/1, 1st Main Road, 1st Cross, New Timber Yard Layout, Mysore Road, Bangalore-560026, has sought clarification regarding the rate of tax applicable on ‘‘supply of plastic alphabets and puzzles in Kannada and English to Government schools and rubber alphabets for blind students’.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or

expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.290/08-09, Dated:7th May, 2009**

It is hereby clarified that 'plastic alphabets and puzzles in Kannada and English and rubber alphabets' are taxable at 12.5% under Section 4(1)(b) of the Karnataka Value Added Tax Act, 2003.

**B.A. HARISH GOWDA**
PR-463 Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**OFFICE OF THE ASSISTANT COMMISSIONER OF COMMERCIAL TAXES, LOCAL VAT OFFICE-380, BELGAUM**

**NOTIFICATION**

**No. LVO-380/BGM/CST/2008-09/B-, Dated:9th June, 2009**

**ASSISTANT COMMISSIONER OF COMMERCIAL TAXES, LOCAL VAT OFFICE-130, BANGALORE, Dated:8th June, 2009**

**(Notified Authority Under the Rule 6(i) of the CST (Karnataka) Rules 1957)**

By virtue of the provision of Rule 12(2) of the CST (Registration & Turnover) Rules 1957 and Rule 6(e) and 6(i) of the CST (Karnataka) Rules 1957, it is hereby notified for general information that the declarations in Form-C described below declared to be obsolete and invalid.

| Series & Serial Number of Declaration Forms lost/ destroyed or Stolen | Name & Address of the dealer to whom declaration forms are issued by the department with date of issue | Registration Certificate No. of the dealer under CST Act, 1956 | The Address of the dealer to whom the declaration was/were sent | Date of issue of Forms by the dealer | Whether lost/destroyed or stolen | Remarks |
|---|---|---|---|---|---|---|
| 0885616 | Shri Mohd Ayub Athani prop, Aasha Traders khade Bazar, Belgaum | TIN 29400704400 | Not issued | Not issued | Destroyed | Destroyed due to fire broke out in the shop. |

Assistant Commissioner of Commercial
PR-516 Taxes, LVO-380, Belgaum.

**COMMERCIAL TAXES DEPARTMENT**

**OFFICE OF THE ASSISTANT COMMISSIONER OF COMMERCIAL TAXES, LOCAL VAT OFFICE-380, BELGAUM**

**NOTIFICATION**

**No. LVO-380/BGM/CST/2008-09/B-, Dated:4th April, 2008**

**ASSISTANT COMMISSIONER OF COMMERCIAL TAXES, LOCAL VAT OFFICE-130, BANGALORE, Dated:8th June, 2009**

**(Notified Authority Under Rule 6(i) of the CST (Karnataka) Rules 1957)**

By virtue of the provisions of Rule 12(2) of the CST (Registration & Turnover) Rules 1957 and Rule 6(e) and 6(i) of the CST (Karnataka) Rules 1957, it is hereby notified for general information that the declarations in Form-C described below declared to be obsolete and invalid.

| Series & Serial Number of Declaration Forms lost/ destroyed or Stolen | Name & Address of the dealer to whom declaration forms are issued by the department with date of issue | Registration Certificate No. of the dealer under CST Act, 1956 | The Address of the dealer to whom the declaration was/were sent | Date of issue of Forms by the dealer | Whether lost/ destroyed or stolen | Remarks |
|---|---|---|---|---|---|---|
| KA-C/01 0579293 | Shri Sanjay Raibagkar, Prop, M/s Amarcon Creations, No.289 4, Khade Bazar Belgaum, Date of issue 04.12.2008 | TIN:297900 08938 CST No.5015754 | Lajja, Mumbai | 03.01.2009 | Lost in transit | - |
| KA-C/01 0579294 | -do- | -do- | Sarang Creations Mumbai | 03.01.2009 | Lost in transit | - |

Assistant Commissioner of Commercial Taxes, LVO-380, Belgaum.

PR-517

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಶ್ರೀಮತಿ ಬಿ. ಅಂಬುಜಾ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಇವರ ತಿಳುವಳಿಕೆ ಪತ್ರ ಸಂಖ್ಯೆ:ಜಿಅದಾ.ಇವಿವಿ.420.2004–05, ದಿನಾಂಕ:08.04.2005.
2) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಜಿಅದಾ.ಎಂವಿವಿ.ಸಿಶಾ(2) 128:2007–08, ದಿನಾಂಕ:12.09.2007.
3) ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿ ದಿನಾಂಕ:10.12.2007.
4) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿರುವ ಪತ್ರ ಸಂಖ್ಯೆ: ಜಿಅದಾ:ಸಿಶಾ(2):253:2008–09, ದಿನಾಂಕ:17.11.2008.
5) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ದಾವಣಗೆರೆ ಇವರ ಪತ್ರ ಸಂಖ್ಯೆ: ಜಿಅದಾ.ಸಿಶಾ(2):253:2008–09, ದಿನಾಂಕ:17.12.2008.

**ಪ್ರಸ್ತಾವನೆ:**

ಶ್ರೀಮತಿ ಬಿ. ಅಂಬುಜಾ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಇವರು ಪ್ರಾಥಮಿಕ ಆರೋಗ್ಯ ಕೇಂದ್ರ ಹಲುವಾಗಲು ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:14.09.1996 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾಗಿದ್ದು ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು ನೌಕರರು ಅಹವಾಲನ್ನು ಸಲ್ಲಿಸಿರುವುದಿಲ್ಲ. ಮೇಲೆ ಓದಲಾದ (2)ರಲ್ಲಿ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಜಿಲ್ಲಾ ಮಲೇರಿಯಾಧಿಕಾರಿಗಳು, ದಾವಣಗೆರೆ ಇವರನ್ನು ವಿಚಾರಣಾಧಿಕಾರಿಗಳಾಗಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ನೇಮಿಸಿದ್ದು ಮೇಲೆ ಓದಲಾದ (3)ರಲ್ಲಿ ವಿಚಾರಣಾ ಅಧಿಕಾರಿಗಳು ವಿಚಾರಣಾ ವರದಿ ಸಲ್ಲಿಸಿದ್ದು ಆರೋಪ ಸಾಬೀತಾಗಿದೆಯೆಂದು ತಿಳಿಸಿರುತ್ತಾರೆ. ಮೇಲೆ ಓದಲಾದ (4) ರಲ್ಲಿ ವಿಚಾರಣಾ ವರದಿಯ ಪ್ರತಿಯನ್ನು ನೌಕರರಿಗೆ ಜಾರಿಗೊಳಿಸಿದ್ದು ನೌಕರರು ಸಮಜಾಯಿಷಿ ಸಲ್ಲಿಸಿರುವುದಿಲ್ಲ. ಆದುದರಿಂದ ಈ ಬಗ್ಗೆ ಕಠಿಣ ಕ್ರಮ ಕೈಗೊಳ್ಳಬೇಕೆಂದು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ದಾವಣಗೆರೆ ಇವರು ಮೇಲೆ ಓದಲಾದ (5)ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಪ್ರಸ್ತಾವನೆ ಹಾಗೂ ವಿಚಾರಣಾ ವರದಿ ಪರಿಶೀಲಿಸಿದ್ದು ಸಾಕಷ್ಟು ಕಾಲಾವಕಾಶ ನೀಡಿದ್ದರೂ ನೌಕರರು ಪ್ರತಿಕ್ರಿಯೆ ನೀಡದಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(23) ಸಿಆರ್:17:2003–04, ಬೆಂಗಳೂರು, ದಿನಾಂಕ:28ನೇ ಫೆಬ್ರವರಿ, 2009**

ಮೇಲೆ ವಿವರಿಸಿರುವ ಕಾರಣಗಳಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಉಷಾ ವಾಸುನ್‌ಕರ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀಮತಿ ಬಿ. ಅಂಬುಜಾ, ಕಿರಿಯ ಮಹಿಳಾ

ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ ಹಲುವಾಗಲು, ಹರಪನಹಳ್ಳಿ ತಾಲ್ಲೂಕು ದಾವಣಗೆರೆ ಜಿಲ್ಲೆ ಇವರ ಅನಧಿಕೃತ ಗೈರು ಹಾಜರಿಗೆ ದಂಡನೆಯಾಗಿ ಸದರಿ ನಿಯಮ 8(viii)ರ ಪ್ರಕಾರ ಮುಂದೆ ಸರ್ಕಾರಿ ಸೇವೆಗೆ ಅನರ್ಹರಾಗುವ ರೀತಿ ಜಾರಿಗೆ ಬರುವಂತೆ ವಜಾಗೊಳಿಸಿ ಆದೇಶಿಸಿರುತ್ತೇನೆ.

**ಡಾ: ಉಷಾ ವಾಸುನ್‌ಕರ್**
ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

ಪಿ.ಆರ್.209

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರ ನಡವಳಿಗಳು

**ವಿಷಯ:** ಶ್ರೀ ಯಶವಂತರಾಜು, ದ್ವಿತೀಯ ದರ್ಜೆ ಸಹಾಯಕ ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ದಾವಣಗೆರೆ ಇವರ ದೋಷಾರೋಪಣೆ ಹಾಗೂ ತಿಳುವಳಿಕೆ ಪತ್ರ ಸಂಖ್ಯೆ:ಜಿಅದಾ.ಸಿಶಾ(2): ವಿಚಾರಣೆ:129:07–08, ದಿನಾಂಕ:12.09.2007.
2) ವಿಚಾರಣಾಧಿಕಾರಿಗಳು ನೇಮಕಾತಿ ಆದೇಶ ಸಂಖ್ಯೆ:ಜಿಅದಾ.ಸಿಶಾ(2)26 :2008–09, ದಿನಾಂಕ:12.05.2008.
3) ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿ ಸಂಖ್ಯೆ:ಜಿಕುಕ:ದಾ:88:08–09, ದಿನಾಂಕ:16.08.2008.
4) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿರುವ ಪತ್ರ ಸಂಖ್ಯೆ:ಜಿಅದಾ:ಸಿಶಾ:(2):23:2008–09, ದಿನಾಂಕ:26.08.2008.
5) ದಾವಣಗೆರೆ, ಟೈಮ್ಸ್ ಕನ್ನಡ ದಿನ ಪತ್ರಿಕೆಯಲ್ಲಿ ಪ್ರಕಟಿಸಿರುವ ಪ್ರಕಟಣಾ ದಿನಾಂಕ:26.09.2008 ಮತ್ತು ಉದಯವಾಣಿಯಲ್ಲಿ ಪ್ರಕಟಿಸಿರುವ ಪ್ರಕಟಣಾ ದಿನಾಂಕ:29.09.2008.
6) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ದಾವಣಗೆರೆ ಇವರ ಪತ್ರ ಸಂಖ್ಯೆ: ಜಿಅದಾ.ಸಿಶಾ(2):181:2008–09, ದಿನಾಂಕ:17.12.2008.

**ಪ್ರಸ್ತಾವನೆ:**

ಶ್ರೀ ಯಶವಂತರಾಜು, ದ್ವಿತೀಯ ದರ್ಜೆ ಸಹಾಯಕ ಇವರು ಪ್ರಾಥಮಿಕ ಆರೋಗ್ಯ ಕೇಂದ್ರ ಕೊಡಗನೂರು ದಾವಣಗೆರೆ ತಾಲ್ಲೂಕು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:14.10.2005 ರಿಂದ 30.05.2006ರ ವರೆಗೆ ಹಾಗೂ ದಿನಾಂಕ:07.04.2007 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾಗಿದ್ದು ಇವರ ಬಗ್ಗೆ ಮೇಲೆ ಓದಲಾದ (1)ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು ನೌಕರರು ಅಹವಾಲನ್ನು ಸಲ್ಲಿಸಿರುವುದಿಲ್ಲ. ಮೇಲೆ ಓದಲಾದ (2)ರಲ್ಲಿ ಪ್ರಕರಣದ ಸತ್ಯಾ ಸತ್ಯತೆಯನ್ನು ಕಂಡುಕೊಳ್ಳಲು ಜಿಲ್ಲಾ ಕುಷ್ಠರೋಗ ನಿಯಂತ್ರಣಾಧಿಕಾರಿಗಳು, ದಾವಣಗೆರೆ ಇವರನ್ನು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದು, ಮೇಲೆ ಓದಲಾದ (3)ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣಾ ವರದಿ ಸಲ್ಲಿಸಿದ್ದು ಆರೋಪ ರುಜುವಾತಾಗಿದೆ ಎಂದು ತಿಳಿಸಿರುತ್ತಾರೆ. ಮೇಲೆ ಓದಲಾದ (4)ರಲ್ಲಿ ವಿಚಾರಣಾ ವರದಿಯ ಪ್ರತಿಯನ್ನು ನೌಕರರಿಗೆ ಜಾರಿಗೊಳಿಸಿದ್ದು ಲಕೋಟೆ ವಾಪಸ್ಸು ಬಂದಿರುತ್ತದೆ. ಮೇಲೆ ಓದಲಾದ (5)ರಲ್ಲಿ ಪತ್ರಿಕಾ ಪ್ರಕಟಣೆ ನೀಡಿದ್ದರೂ ನೌಕರರಿಂದ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲ. ಆದುದರಿಂದ ಇವರ ಬಗ್ಗೆ ಕಠಿಣ ಕ್ರಮ ಕೈಗೊಳ್ಳಬೇಕೆಂದು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ದಾವಣಗೆರೆ ಇವರು ಮೇಲೆ ಓದಲಾದ (6)ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿದ್ದು, ನೌಕರರಿಗೆ ಸಾಕಷ್ಟು ಕಾಲಾವಕಾಶ ನೀಡಿದ್ದರೂ ಪ್ರತಿಕ್ರಿಯೆ ಇಲ್ಲದೇ ಇರುವುದರಿಂದ ವಿಚಾರಣಾ ವರದಿ ಹಾಗೂ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ದಾವಣಗೆರೆ ಇವರ ಶಿಫಾರಸ್ಸನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(23) ಸಿಆರ್:30:2008–09, ಬೆಂಗಳೂರು, ದಿನಾಂಕ:28ನೇ ಫೆಬ್ರವರಿ, 2009**

ಮೇಲೆ ವಿವರಿಸಿರುವ ಕಾರಣಗಳಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಉಷಾ ವಾಸುನ್‌ಕರ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀ ಯಶವಂತರಾಜು, ದ್ವಿತೀಯ ದರ್ಜೆ ಸಹಾಯಕ, ಪ್ರಾಥಮಿಕ ಆರೋಗ್ಯ ಕೇಂದ್ರ ಕೊಡಗನೂರು, ದಾವಣಗೆರೆ ತಾಲ್ಲೂಕು ಜಿಲ್ಲೆ, ಇವರ ಅನಧಿಕೃತ ಗೈರು ಹಾಜರಿಗೆ ದಂಡನೆಯಾಗಿ ಸದರಿ ನಿಯಮ 8(viii)ರ ಪ್ರಕಾರ ಮುಂದೆ ಸರ್ಕಾರಿ ಸೇವೆಗೆ ಅನರ್ಹರಾಗುವ ರೀತಿ ತಕ್ಷಣದಿಂದ ಜಾರಿಗೆ ಬರುವಂತೆ ವಜಾಗೊಳಿಸಿ ಆದೇಶಿಸಿರುತ್ತೇನೆ.

**ಡಾ: ಉಷಾ ವಾಸುನ್‌ಕರ್**
ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

ಪಿ.ಆರ್.210

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ, ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀ ಸಿ. ಆನಂದಬಾಬು, ದ್ವಿತೀಯ ದರ್ಜೆ ಸಹಾಯಕ ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:** 1) ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆ ಪತ್ರ ಸಂಖ್ಯೆ:ಡಿಸಿಎನ್(5)ಸಿಆರ್–23: 02–03, ದಿನಾಂಕ:04.12.2006.

2) ನೌಕರರು ಸಲ್ಲಿಸಿರುವ ಸಮಜಾಯಿಷಿ ದಿನಾಂಕ:12.01.2007.

3) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ:ಡಿಪಿಎನ್(5)ಸಿಆರ್:23: 02–03 ದಿನಾಂಕ:27.07.2007.

4) ವಿಚಾರಣಾ ವರದಿ ಸಂಖ್ಯೆ: ಮುಜಾಅ:ಜಾಕೋ:03:2007–08, ದಿನಾಂಕ:11.08.2008.

5) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿರುವ ಸೂಚನಾ ಪತ್ರ ಸಂಖ್ಯೆ: ಡಿಪಿಎನ್(5) ಸಿಆರ್:23:02–03, ದಿನಾಂಕ:01.09.2008.

**ಪ್ರಸ್ತಾವನೆ:**

ಶ್ರೀ ಸಿ. ಆನಂದಬಾಬು, ದ್ವಿತೀಯ ದರ್ಜೆ ಸಹಾಯಕ, ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಕಿತ್ತೂರು, ಪಿರಿಯಾಪಟ್ಟಣ ತಾ: ಮೈಸೂರು ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:07.07.2005 ರಿಂದ 01.03.2006 ರವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿದ್ದು ಮೇಲೆ ಓದಲಾದ (1)ರಲ್ಲಿ ದೋಷಾರೋಪಣೆ ಹಾಗೂ ತಿಳುವಳಿಕೆ ಜಾರಿಗೊಳಿಸಿದ್ದು ಮೇಲೆ ಓದಲಾದ (2)ರಲ್ಲಿ ನೌಕರರು ಸಮಜಾಯಿಷಿ ಸಲ್ಲಿಸಿರುತ್ತಾರೆ. ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಮೇಲೆ ಓದಲಾದ (3)ರಲ್ಲಿ ಮುಖ್ಯ ಜಾಗೃತಾಧಿಕಾರಿಗಳು, ಜಾಗೃತಕೋಶ ಇವರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಗಿತ್ತು. ಮೇಲೆ ಓದಲಾದ (4)ರಲ್ಲಿ ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣಾ ವರದಿ ಸಲ್ಲಿಸಿ ಆರೋಪ ಸಾಬೀತಾಗಿದೆಯೆಂದು ತಿಳಿಸಿರುತ್ತಾರೆ. ಮೇಲೆ ಓದಲಾದ (5)ರಲ್ಲಿ ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ್ದು ನೌಕರರು ದಿನಾಂಕ:22.09.2008 ರಂದು ವಿಚಾರಣಾ ವರದಿ ಸ್ವೀಕರಿಸಿದ್ದು ಅಹವಾಲು ಸಲ್ಲಿಸಿರುವುದಿಲ್ಲ. ನೌಕರರಿಗೆ ಸಾಕಷ್ಟು ಕಾಲಾವಕಾಶ ನೀಡಿದ್ದರೂ ಅಹವಾಲು ಸಲ್ಲಿಸದೇ ಇರುವುದರಿಂದ ವಿಚಾರಣಾ ವರದಿ ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(5) ಸಿಆರ್:23:2002–03, ಬೆಂಗಳೂರು, ದಿನಾಂಕ:28ನೇ ಫೆಬ್ರವರಿ, 2009**

ಮೇಲೆ ವಿವರಿಸಿರುವ ಕಾರಣಗಳಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಉಷಾ ವಾಸುನ್‌ಕರ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀ ಸಿ.ಆನಂದಬಾಬು, ದ್ವಿತೀಯ ದರ್ಜೆ ಸಹಾಯಕರು, ಪ್ರಾಥಮಿಕ ಆರೋಗ್ಯ ಕೇಂದ್ರ, ರಾವಂದೂರು, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ, ಇವರ ಅನಧಿಕೃತ ಗೈರು ಹಾಜರಿಗೆ ದಂಡನೆಯಾಗಿ ಸದರಿ ನಿಯಮ 8(8)ರ ಪ್ರಕಾರ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿರುತ್ತೇನೆ.

**ಡಾ: ಉಷಾ ವಾಸುನ್‌ಕರ್**

ಪಿ.ಆರ್.211

ನಿರ್ದೇಶಕರು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ, ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀ ಕೆ. ಪ್ರಶಾಂತಕುಮಾರ್, ಫಾರ್ಮಾಸಿಸ್ಟ್, ಪ್ರಾ.ಆ.ಕೇಂದ್ರ, ಕನಸವಾಡಿ, ದೊಡ್ಡಬಳ್ಳಾಪುರ ತಾ: ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರನ್ನು ಸರ್ಕಾರಿ ಸೇವೆಯಿಂದ ಬಿಡುಗಡೆಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಜಿಲ್ಲಾ ಆರೋಗ್ಯ ಮತ್ತು ಕು.ಕ. ಅಧಿಕಾರಿಗಳು ಮೈಸೂರು ಜಿಲ್ಲೆ, ಇವರ ಪತ್ರ ಸಿಡಿ(2)572:06–07, ದಿನಾಂಕ:28.09.2006.

2) ಜಿಲ್ಲಾ ಆರೋಗ್ಯ ಮತ್ತು ಕು.ಕ. ಅಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರ ಪತ್ರ ಸಂಖ್ಯೆ: ಸಿ(3) 119:04–05, ದಿನಾಂಕ:04.12.2008.

**ಪ್ರಸ್ತಾವನೆ:**

ಶ್ರೀ ಕೆ. ಪ್ರಶಾಂತಕುಮಾರ್, ಫಾರ್ಮಾಸಿಸ್ಟ್, ಪ್ರಾ.ಆ.ಕೇಂದ್ರ, ಕನಸವಾಡಿ, ಇವರು ಈ ನಿರ್ದೇಶನಾಲಯದ ಆದೇಶ ಸಂಖ್ಯೆ: ಡಿಆರ್‌ಸಿ(2):3:02–03, ದಿನಾಂಕ:19.05.2003ರಲ್ಲಿ ಇಲಾಖಾ ಆಯ್ಕೆ ಸಮಿತಿಯಿಂದ ಹಿಂಬಾಕಿ ಹುದ್ದೆಯಲ್ಲಿ ಫಾರ್ಮಾಸಿಸ್ಟ್ ಆಗಿ ನೇಮಕಗೊಂಡು ದಿನಾಂಕ:04.06.2003 ರಂದು ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಸದರಿ ನೌಕರರು ದಿನಾಂಕ:04.06.2003 ರಿಂದ 24.11.2003 ರವರೆಗೆ ಕರ್ತವ್ಯ ನಿರ್ವಹಿಸಿ, ದಿನಾಂಕ:25.11.2003 ರಿಂದ

ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ. ಸದರಿ ನೌಕರರಿಗೆ ನಿರ್ದೇಶನಾಲಯದ ಪತ್ರ ಸಂಖ್ಯೆ: ಡಿಪಿಎನ್ (1) ಸಿಆರ್40:04–05, ದಿನಾಂಕ:15.03.2005ರಲ್ಲಿ ಅನಧಿಕೃತ ಗೈರುಹಾಜರಿ ಬಗ್ಗೆ ಇಲಾಖಾ ವಿಚಾರಣೆ ಬಾಕಿ ಇರಿಸಿ, ಪುನಃ ಕರ್ತವ್ಯಕ್ಕೆ ಹಾಜರಾಗಲು ಅನುಮತಿಸಿ, ಜಿಲ್ಲಾ ಆರೋಗ್ಯ ಮತ್ತು ಕು.ಕ. ಅಧಿಕಾರಿಗಳು, ಮೈಸೂರು ಇವರ ಅಧೀನಕ್ಕೆ ನೇಮಿಸಲಾಗಿದ್ದು, ನೌಕರರು ನೇಮಿಸಿದ ಜಾಗದಲ್ಲಿ ಕರ್ತವ್ಯಕ್ಕೆ ಹಾಜರಾಗಿಲ್ಲವೆಂದು ಉಲ್ಲೇಖ 1 ರ ಪತ್ರದಲ್ಲಿ ತಿಳಿಯಲಾಗಿದೆ. ಇದರಿಂದ ನೌಕರರಿಗೆ ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಆಸಕ್ತಿ ಇಲ್ಲವೆಂದು ಕಂಡುಬರುವ ಕಾರಣ ಹಾಗೂ ಸದರಿ ನೌಕರರು ಖಾಯಂಪೂರ್ವ ಸೇವಾವಧಿಯಲ್ಲಿಯೇ ಅನಧಿಕೃತ ಗೈರುಹಾಜರಿ ಆಗಿದ್ದು, ಸರ್ಕಾರಿ ಸೇವೆಯಿಂದ ಬಿಡುಗಡೆಗೊಳಿಸಲು ತೀರ್ಮಾನಿಸಿದ್ದು ಈ ಆದೇಶ.

**ಆದೇಶ ಸಂಖ್ಯೆ: ಡಿಪಿಎನ್(1) ಸಿಆರ್:40:04–05, ಬೆಂಗಳೂರು, ದಿನಾಂಕ:11ನೇ ಮಾರ್ಚ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಕೆ. ಪ್ರಶಾಂತ್‌ಕುಮಾರ್, ಫಾರ್ಮಾಸಿಸ್ಟ್, ಪ್ರಾ.ಆ.ಕೇಂದ್ರ, ಕನಸವಾಡಿ, ದೊಡ್ಡಬಳ್ಳಾಪುರ ತಾ: ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರನ್ನು 1977ರ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳ ನಿಯಮ 5(1)(ಬಿ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನೇಮಕ ಮಾಡಿದ ಹುದ್ದೆಗೆ ಯೋಗ್ಯರಲ್ಲ ಎಂದು ನಿರ್ಣಯಿಸಿ, ಸರ್ಕಾರ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಬಿಡುಗಡೆಗೊಳಿಸಿ ಆದೇಶಿಸಿರುತ್ತೇನೆ.

**ಡಾ: ಉಷಾ ವಾಸುನ್‌ಕರ್**

ಪಿ.ಆರ್.291 ನಿರ್ದೇಶಕರು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ ಬೆಂಗಳೂರು, ಇವರ ನಡವಳಿಗಳು

**ವಿಷಯ:** ಶ್ರೀಮತಿ ಎ.ಎಂ. ಕೈಸರಜಾನ್, ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರು ಸಾರ್ವಜನಿಕ ಆರೋಗ್ಯ ಸಂಸ್ಥೆ ಬೆಂಗಳೂರು ಇವರ ಅನಧಿಕೃತ ಗೈರುಹಾಜರಿ ಆರೋಪ ಇಲಾಖಾ ವಿಚಾರಣೆ ಅಂತಿಮ ಆದೇಶ.

**ಓದಲಾಗಿದೆ:** 1) ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ:ಡಿಪಿಎನ್(1)ಸಿಆರ್:67: 01–02, ದಿನಾಂಕ:22.11.2001.

2) ನೌಕರರು ಲಿಖಿತ ಅಹವಾಲು ಪತ್ರ ದಿನಾಂಕ ಇಲ್ಲ.

3) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ:ಡಿಪಿಎನ್(1)ಸಿಆರ್:67:01–02 ದಿನಾಂಕ: 31.05.2002.

4) ವಿಚಾರಣಾ ವರದಿ ಸಂಖ್ಯೆ: ವಿಅ:ವಿಚಾರಣೆ:ಎನ್‌ಜಿ:ಮುಚಿಕ:ಜಾಕೋ: ಎನ್.ಜಿ:60: 02–03 ದಿನಾಂಕ: 04.02.2004.

5) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ: ಡಿಪಿಎನ್(1) ಸಿಆರ್:67:01–02, ದಿನಾಂಕ:21.05.2004.

6) ಪತ್ರಿಕಾ ಪ್ರಕಟಣೆ ದಿನಾಂಕ:03.12.2008.

**ಪ್ರಸ್ತಾವನೆ:**

ಶ್ರೀಮತಿ ಎ.ಎಂ. ಕೈಸರಜಾನ್, ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರು ಸಾರ್ವಜನಿಕ ಆರೋಗ್ಯ ಸಂಸ್ಥೆ ಬೆಂಗಳೂರು ಇವರು ಈ ಹಿಂದೆ ಸಾರ್ವಜನಿಕ ಆರೋಗ್ಯ ಸಂಸ್ಥೆ ಬೆಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ದಿನಾಂಕ:11.02.1997 ರಿಂದ ಇಲ್ಲಿಯವರೆಗೂ ಅನಧಿಕೃತ ಗೈರುಹಾಜರಿಯಾದ ಬಗ್ಗೆ ಮೇಲೆ ಓದಲಾದ (1)ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2)ರಲ್ಲಿನ ಪತ್ರದಲ್ಲಿ ತನ್ನ ಲಿಖಿತ ಅಹವಾಲನ್ನು ಸಲ್ಲಿಸಿದಂತೆ ಪರಿಶೀಲಿಸಿ, ಅದು ಸಮರ್ಪಕವಾಗಿರದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತ ಅಧಿಕಾರಿ (ಜಾಗೃತ ಕೋಶ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (4)ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ ಮೇಲೆ ಓದಲಾದ (5)ರಲ್ಲಿನ ಸೂಚನಾಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕೆ ಅನುಗುಣವಾಗಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸದೇ ಇರುವುದರಿಂದ ದಿನಾಂಕ:03.12.2008ರಲ್ಲಿ ಪತ್ರಿಕಾ ಪ್ರಕಟಣೆ ನೀಡಲಾಯಿತು.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(1) ಸಿಆರ್:67:01–02, ಬೆಂಗಳೂರು, ದಿನಾಂಕ:11ನೇ ಮಾರ್ಚ್, 2009**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಉಷಾ ವಾಸುನ್‌ಕರ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀಮತಿ ಎ.ಎಂ. ಕೈಸರ್‌ಜಾನ್, ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರು, ಸಾರ್ವಜನಿಕ ಆರೋಗ್ಯ ಸಂಸ್ಥೆ, ಬೆಂಗಳೂರು ಇವರನ್ನು ದಂಡನೆಯಾಗಿ ಸದರಿ ನಿಯಮ 8(viii)ರ ಪ್ರಕಾರ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿದ್ದೇನೆ.

**ಡಾ: ಉಷಾ ವಾಸುನ್‌ಕರ್**
ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

ಪಿ.ಆರ್.292

**ಜಿಲ್ಲಾ ಪಂಚಾಯತ್, ತುಮಕೂರು**

**ಸಾರ್ವಜನಿಕ ಶಿಕ್ಷಣ ಇಲಾಖೆ, ಉಪನಿರ್ದೇಶಕರ ಕಛೇರಿ, ತುಮಕೂರು (ದ) ಜಿಲ್ಲೆ**

**ಜ್ಞಾಪನಾ**

**ಸಂಖ್ಯೆ: ಇ5/ಅ.ಗೈ.ಹಾ–34/03–04/6862, ದಿನಾಂಕ:9ನೇ ಜನವರಿ, 2009**

**ವಿಷಯ:** ಶ್ರೀ ಮಾಯರಂಗಯ್ಯ ಸಹಶಿಕ್ಷಕರು ಸರ್ಕಾರಿ ಉರ್ದು ಹಿ.ಪ್ರಾ.ಶಾಲೆ ಕಗ್ಗೆರೆ ಕುಣಿಗಲ್ ತಾಲ್ಲೂಕು, (ಪ್ರಸ್ತುತ ಸರ್ಕಾರಿ ಹಿ.ಪ್ರಾ.ಶಾಲೆ ಮರೆನಡುಪಾಳ್ಯ ಚಿ.ನಾ.ಹಳ್ಳಿ ತಾಲ್ಲೂಕು ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಿದ್ದು ಕರ್ತವ್ಯಕ್ಕೆ ಹಾಜರಾಗಿಲ್ಲ) ಇವರ ಅನಧಿಕೃತ ಗೈರುಹಾಜರಿಯ ಬಗ್ಗೆ.

**ಉಲ್ಲೇಖ:**
1) ಕ್ಷೇತ್ರ ಶಿಕ್ಷಣಾಧಿಕಾರಿಗಳು ಕುಣಿಗಲ್ ಇವರ ಪತ್ರದ ಸಂಖ್ಯೆ:ಸಿ1(ಸಿ5) ಶಾ.ಕ.ಹಾ–32/2000–01, ದಿನಾಂಕ:01.08.2003 ಮತ್ತು ದಿನಾಂಕ:02.12.2003.
2) ಕ್ಷೇತ್ರ ಶಿಕ್ಷಣಾಧಿಕಾರಿಗಳು ಕುಣಿಗಲ್ ತಾಲ್ಲೂಕು ಇವರ ಪತ್ರದ ದಿನಾಂಕ:24.03.2004ರಲ್ಲಿ ಆರೋಪಪಟ್ಟಿ ಜಾರಿ ಮಾಡಿರುವುದು.
3) ಕ್ಷೇತ್ರ ಶಿಕ್ಷಣಾಧಿಕಾರಿಗಳು ಕುಣಿಗಲ್ ಇವರ ಪತ್ರದ ದಿನಾಂಕ:27.05.2004.
4) ವಿಚಾರಣಾಧಿಕಾರಿಗಳ ವರದಿ ದಿನಾಂಕ;07.07.2005.
5) ಕ್ಷೇತ್ರ ಶಿಕ್ಷಣಾಧಿಕಾರಿಗಳು ಕುಣಿಗಲ್ ಇವರ ಪತ್ರದ ಸಂಖ್ಯೆ: ಸಿ2(ಸಿ1) ಅ.ಗೈ.ಹಾ1/04–05, ದಿನಾಂಕ:03.10.2007ರಲ್ಲಿ ಆರೋಪಪಟ್ಟಿ ಜಾರಿ ಮಾಡಿರುವುದು.
6) ಕ್ಷೇತ್ರ ಶಿಕ್ಷಣಾಧಿಕಾರಿಗಳು ಕುಣಿಗಲ್ ಇವರ ಪತ್ರದ ಸಂಖ್ಯೆ: ಸಿ2(ಸಿ1) ಅ.ಗೈ.ಹಾ1/04–05, ದಿನಾಂಕ:24.11.2007.
7) ಈ ಕಛೇರಿಯ ಸಮಸಂಖ್ಯೆಯ ಪತ್ರದ ದಿನಾಂಕ:01.07.2008.
8) ಈ ಕಛೇರಿಯಿಂದ ನೀಡಿರುವ 2ನೇ ಕಾರಣ ಕೇಳುವ ನೋಟೀಸ್ ದಿನಾಂಕ:04.10.2008.
9) ಬಿ.ಇ.ಓ. ಚಿ.ನಾ.ಹಳ್ಳಿ ಇವರ ಪತ್ರದ ದಿನಾಂಕ:17.09.2008.

**ಪ್ರಸ್ತಾವನೆ:**

ಶ್ರೀ ಮಾಯರಂಗಯ್ಯ ಸಹಶಿಕ್ಷಕರು ಸರ್ಕಾರಿ ಹಿ.ಪ್ರಾ.ಶಾಲೆ ಮರೆನಡುಪಾಳ್ಯ ಚಿ.ನಾ.ಹಳ್ಳಿ ತಾಲ್ಲೂಕು (ಪ್ರಸ್ತುತ ಸ್ಥಳ ನಿಯುಕ್ತಿಗೊಳಿಸಿದ್ದು ಕರ್ತವ್ಯಕ್ಕೆ ಹಾಜರಾಗಿಲ್ಲ) ಇವರು ಈ ಹಿಂದೆ ಶಾಲಾ ಕೆಲಸಕ್ಕೆ ಆಗ್ಗಿಂದ್ದಾಗ್ಗೆ ಗೈರುಹಾಜರಿ ಆಗಿರುತ್ತಾರೆ.

ಕ್ಷೇತ್ರ ಶಿಕ್ಷಣಾಧಿಕಾರಿಗಳು ಕುಣಿಗಲ್ ಇವರು ಉಲ್ಲೇಖ (1)ರ ಪತ್ರದ ದಿನಾಂಕ:01.08.2003ರಲ್ಲಿ ಶಿಕ್ಷಕರ ಗೈರುಹಾಜರಿಯಾಗಿ ಮಕ್ಕಳ ಶೈಕ್ಷಣಿಕ ಪ್ರಗತಿಗೆ ತೊಂದರೆ ಉಂಟುಮಾಡಿರುವುದನ್ನು ಪರಿಗಣಿಸಿ ಅಮಾನತ್ತಿನಲ್ಲಿಟ್ಟು ನಂತರ ಗೈರು ಹಾಜರಿಯ ಬಗ್ಗೆ ಇಲಾಖೆ ವಿಚಾರಣೆ ಕಾಯ್ದಿರಿಸಿ ಸರ್ಕಾರಿ ಹಿ.ಪ್ರಾ.ಶಾಲೆ ತರಿಕೆರೆ ಕುಣಿಗಲ್ ತಾಲ್ಲೂಕು ಇಲ್ಲಿಗೆ ಸೇವೆಯಲ್ಲಿ ಪುನರ್ ಸ್ಥಾಪಿಸಿರುತ್ತಾರೆ.

ಈ ಶಿಕ್ಷಕರ ಗೈರುಹಾಜರಿಯ ಬಗ್ಗೆ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿ 1957ರ ನಿಯಮ 11ರಂತೆ ಶಿಸ್ತು ಕ್ರಮಜರುಗಿಸಲು ಉದ್ದೇಶಿಸಿ ದೋಷಾರೋಪ ಪಟ್ಟಿಯನ್ನು ಜಾರಿಗೊಳಿಸಿದ್ದು ಆರೋಪಿ ನೌಕರರು ರಕ್ಷಣಾ ಹೇಳಿಕೆಯನ್ನು ಸಲ್ಲಿಸದೆ ಇರುವುದರಿಂದ ಸತ್ಯಾಸತ್ಯತೆಯನ್ನು ತಿಳಿಯಲು ಶ್ರೀಮತಿ ಕುಮಾರಿ ಶೈಲಜ ಮುಖ್ಯ ಶಿಕ್ಷಕರು ಸರ್ಕಾರಿ ಪ್ರೌಢಶಾಲೆ ಸಿಂಗೋನಹಳ್ಳಿ, ಕುಣಿಗಲ್ ತಾಲ್ಲೂಕು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಶ್ರೀ ಹನುಮಂತರಾಯಪ್ಪ ಶಿಕ್ಷಣ ಸಂಯೋಜಕರು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಕುಣಿಗಲ್ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಈ ಪ್ರಕರಣದ ವಿಚಾರಣೆ ನಡೆಸಿ ವರದಿಯನ್ನು ನೀಡುವಂತೆ ಉಲ್ಲೇಖ (3)ರಲ್ಲಿ ತಿಳಿಸಲಾಗಿದೆ.

**ಆರೋಪ:1:** ಶ್ರೀ ಮಾಯರಂಗಯ್ಯ ಕನ್ನಡ ಸಹಶಿಕ್ಷಕರು ಆದ ಇವರು ಸರ್ಕಾರಿ ಉರ್ದು ಕಿ.ಪ್ರಾ.ಶಾಲೆ ಕಗ್ಗೆರೆ ಕುಣಿಗಲ್ ತಾಲ್ಲೂಕು, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ:01.06.1998 ರಿಂದ ದಿನಾಂಕ:13.09.2002

ರವರೆಗೆ ಒಟ್ಟು 938 ದಿನಗಳು ಶಾಲಾ ಕೆಲಸಕ್ಕೆ ಅನಧಿಕೃತ ಗೈರುಹಾಜರಾಗಿ ಶಾಲಾ ಶೈಕ್ಷಣಿಕ ಪ್ರಗತಿಗೆ ದಕ್ಕೆ ಉಂಟು ಮಾಡಿರುವುದು.

ವಿಚಾರಣಾಧಿಕಾರಿಗಳು ಈ ಪ್ರಕರಣದ ಸಮಗ್ರ ವಿಚಾರಣೆ ನಡೆಸಿ ಉಲ್ಲೇಖ (4) ರಲ್ಲಿ ವರದಿ ನೀಡುತ್ತಾ ಆಪಾದಿತ ಶಿಕ್ಷಕರು ದಿನಾಂಕ:01.06.1998 ರಿಂದ ದಿನಾಂಕ:13.09.2002 ರವರೆಗಿನ ಅವಧಿಯಲ್ಲಿ ಒಟ್ಟು 938 ದಿನಗಳು ಗೈರುಹಾಜರಾಗಿರುವ ಆಪಾದನೆಗಳನ್ನು ವಿಚಾರಣಾಧಿಕಾರಿಗಳ ಮುಂದೆ ಆಪಾದಿತ ಶಿಕ್ಷಕರು ಹಾಜರಾಗಿ ತಮ್ಮ ಮೇಲೆ ಮಾಡಿರುವ ಆರೋಪವನ್ನು ಒಪ್ಪಿಕೊಂಡು ಸ್ವಯಂ ಲಿಖಿತ ಹೇಳಿಕೆಯನ್ನು ನೀಡಿರುವುದರಿಂದ ಆಪಾದಿತ ಶಿಕ್ಷಕರ ಮೇಲೆ ಮಾಡಿರುವ ಆರೋಪಗಳು ಸಾಬೀತಾಗಿದ್ದು ದೃಢಪಟ್ಟಿರುತ್ತದೆ ಎಂದು ವರದಿ ನೀಡಿರುವುದನ್ನು ಒಪ್ಪಲಾಗಿದೆ.

ಸದರಿ ವಿಚಾರಣಾ ವರದಿಯನ್ನು ಆಧರಿಸಿ ವಿಚಾರಣೆ ವರದಿಯ ಬಗ್ಗೆ ಆಪಾದಿತ ನೌಕರರಿಗೆ ಉಲ್ಲೇಖ (8) ರಲ್ಲಿ 2ನೇ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ ಲಿಖಿತ ವಿವರಣೆ ನೀಡಲು ತಿಳಿಸಲಾಗಿತ್ತು. ಆರೋಪಿ ಶಿಕ್ಷಕರು ವಿವರಣೆ ನೀಡಿರುವುದಿಲ್ಲ.

ಮುಂದುವರಿದು ಈ ಶಿಕ್ಷಕರು ಸರ್ಕಾರಿ ಹಿ.ಪ್ರಾ.ಶಾಲೆ ತರಿಕೆರೆ ಕುಣಿಗಲ್ ತಾಲ್ಲೂಕು, ಈ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯನ್ನು ದಿನಾಂಕ:07.06.2007 ರಿಂದ ಸೇವೆಗೆ ಅನಧಿಕೃತ ಗೈರುಹಾಜರಿ ಆಗಿ ಶೈಕ್ಷಣಿಕ ಪ್ರಗತಿಗೆ ದಕ್ಕೆ ಉಂಟುಮಾಡಿರುವುದರಿಂದ ಉಲ್ಲೇಖ (6)ರಲ್ಲಿ ಸೇವೆಯಿಂದ ಅಮಾನತ್ತಿನಲ್ಲಿರಿಸಿ ನಂತರ ಉಲ್ಲೇಖ (7)ರಲ್ಲಿ ಅಮಾನತ್ತು ತೆರವು ಮಾಡಿ ಸೇವೆಯಲ್ಲಿ ಪುನರ್ ಸ್ಥಾಪಿಸಿ ಸರ್ಕಾರಿ ಹಿ.ಪ್ರಾ.ಶಾಲೆ ಮಲೆನಡುಪಾಳ್ಯ ಚಿ.ನಾ.ಹಳ್ಳಿ ತಾಲ್ಲೂಕು ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಿದ್ದು ಈ ಶಾಲೆಯಲ್ಲಿಯೂ ಸಹ ಕರ್ತವ್ಯಕ್ಕೆ ಹಾಜರಾಗದೇ ಸ್ಥಳ ಮಾರ್ಪಾಡಿಗಾಗಿ ಪ್ರಯತ್ನಿಸುತ್ತಾ ಕಾಲಹರಣ ಮಾಡಿ ಕರ್ತವ್ಯಲೋಪ ಎಸಗಿರುತ್ತಾರೆ.

ಈ ಶಿಕ್ಷಕರು ಸರ್ಕಾರಿ ಹಿ.ಪ್ರಾ.ಶಾಲೆ ತರಿಕೆರೆ ಕುಣಿಗಲ್ ತಾಲ್ಲೂಕು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಶಾಲಾ ಕೆಲಸಕ್ಕೆ ಅನಧಿಕೃತ ಗೈರುಹಾಜರಿ ಆಗಿ ಶೈಕ್ಷಣಿಕ ಪ್ರಗತಿಗೆ ದಕ್ಕೆ ಉಂಟುಮಾಡಿರುವ ವಿಚಾರದಲ್ಲಿ ಉಲ್ಲೇಖ (5)ರಲ್ಲಿ ಆರೋಪ ಪಟ್ಟಿಯನ್ನು ಜಾರಿ ಮಾಡಿದ್ದು, ಆಪಾದಿತ ಶಿಕ್ಷಕರು ಲಿಖಿತ ರಕ್ಷಣಾ ಹೇಳಿಕೆ ಸಲ್ಲಿಸದೆ ಇರುವುದರಿಂದ ಆರೋಪಗಳನ್ನು ಒಪ್ಪಿರುತ್ತಾರೆ ಎಂದು ಭಾವಿಸಿದ್ದು ಈ ಶಿಕ್ಷಕರು ಇವರ ಸೇವಾ ಅವಧಿಯಲ್ಲಿ ಪದೇ ಪದೇ ದೀರ್ಘಕಾಲದ ಗೈರುಹಾಜರಿ ಆಗಿದ್ದು ಕರ್ತವ್ಯಕ್ಕೆ ಹಾಜರಾಗಲು ತಿಳಿಸಿದರೂ ಹಾಜರಾಗದೆ ಮಕ್ಕಳ ಶೈಕ್ಷಣಿಕ ಪ್ರಗತಿಗೆ ದಕ್ಕೆ ಉಂಟು ಮಾಡಿರುವುದು ವಿಚಾರಣೆಯಲ್ಲಿ ಗೈರು ಹಾಜರಿ ಆಪಾದನೆ ಸಾಬೀತಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಶ್ರೀ ಮಾಯರಂಗಯ್ಯ ಸಹಶಿಕ್ಷಕರು ಸರ್ಕಾರಿ ಹಿ.ಪ್ರಾ. ಶಾಲೆ ಮರೆನಡುಪಾಳ್ಯ ಚಿ.ನಾ.ಹಳ್ಳಿ ತಾಲ್ಲೂಕು (ಪ್ರಸ್ತುತ ಸ್ಥಳ ನಿಯುಕ್ತಿಗೊಳಿಸಿದ್ದು ಕರ್ತವ್ಯಕ್ಕೆ ಹಾಜರಾಗಿಲ್ಲ) ಇವರು ಈ ಹಿಂದೆ ಸರ್ಕಾರಿ ಉರ್ದು ಕಿ.ಪ್ರಾ.ಶಾಲೆ ಕಗ್ಗೆರೆ ಕುಣಿಗಲ್ ತಾ: ಮತ್ತು ಸರ್ಕಾರಿ ಹಿ.ಪ್ರಾ.ಶಾಲೆ ತರಿಕೆರೆ ಕುಣಿಗಲ್ ತಾ: ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಶಾಲಾ ಕೆಲಸಕ್ಕೆ ಅನಧಿಕೃತ ಗೈರುಹಾಜರಾಗಿರುವ ಆಪಾದನೆಗಳು ದೃಢಪಟ್ಟಿರುವುದರಿಂದ ಶ್ರೀ ಬಿ.ಎ. ರಾಜಶೇಖರ ಉಪನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು ಸಾ.ಶಿ. ಇಲಾಖೆ, ತುಮಕೂರು (ದ) ಆದ ನಾನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮ 1957ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮ 8(viii)ರ ಪ್ರಕಾರ ಶ್ರೀ ಮಾಯರಂಗಯ್ಯ ಇವರನ್ನು ಸೇವೆಯಿಂದ ವಜಾಮಾಡಿ ಆದೇಶಿಸಿರುತ್ತೇನೆ.

ಕ್ಷೇತ್ರ ಶಿಕ್ಷಣಾಧಿಕಾರಿಗಳು ಕುಣಿಗಲ್ ಇವರು ಈ ಆದೇಶವನ್ನು ನೌಕರರ ಸೇವಾವಹಿಯಲ್ಲಿ ನಮೂದಿಸಿ ಮೇಲಿನ ಆದೇಶದಂತೆ ನಿಯಮಾನುಸಾರ ಅಗತ್ಯ ಕ್ರಮಕೈಗೊಳ್ಳಲು ತಿಳಿಸಿದೆ.

**ಬಿ.ಎ. ರಾಜಶೇಖರ**

ಪಿ.ಆರ್.112

ಉಪನಿರ್ದೇಶಕರು ಹಾಗೂ ಶಿಸ್ತುಪ್ರಾಧಿಕಾರಿಗಳು,
ಸಾರ್ವಜನಿಕ ಶಿಕ್ಷಣ ಇಲಾಖೆ, ತುಮಕೂರು (ದ).

**ಜಿಲ್ಲಾ ಪಂಚಾಯತ್, ತುಮಕೂರು**

**ಸಾರ್ವಜನಿಕ ಶಿಕ್ಷಣ ಇಲಾಖೆ, ಉಪನಿರ್ದೇಶಕರ ಕಛೇರಿ, ತುಮಕೂರು (ದ) ಜಿಲ್ಲೆ**

**ಜ್ಞಾಪನಾ**

**ಸಂಖ್ಯೆ: ಇ5/ದೂರು–56/06–07/6841, ದಿನಾಂಕ:17ನೇ ಜನವರಿ, 2009**

**ವಿಷಯ:** ಶ್ರೀ ಡಿ. ಗಂಗಾಧರಯ್ಯ ಸಹಶಿಕ್ಷಕರು ಸರ್ಕಾರಿ ಹಿ.ಪ್ರಾ.ಶಾಲೆ ಹರಿದಾಸನಹಳ್ಳಿ ತುರುವೇಕೆರೆ ತಾಲ್ಲೂಕು. ಇವರು ಈ ಹಿಂದೆ ಸರ್ಕಾರಿ ಹಿ.ಪ್ರಾ.ಶಾಲೆ. ತಗ್ಗೀಹಳ್ಳಿ ಗುಬ್ಬಿ ತಾಲ್ಲೂಕು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಆರೋಪಗಳ ಬಗ್ಗೆ ಶಿಸ್ತುಕ್ರಮ ಜರುಗಿಸುವ ಬಗ್ಗೆ.

**ಉಲ್ಲೇಖ:** 1) ಕ್ಷೇತ್ರ ಶಿಕ್ಷಣಾಧಿಕಾರಿಗಳು ಗುಬ್ಬಿ ತಾಲ್ಲೂಕು ಇವರ ಜ್ಞಾಪನ ಸಂ:ಆ5/ಪ್ರಾ.ಶಾ.ಶಿ.ದೂರು 02/06–07 ದಿನಾಂಕ:12.01.2007.

2) ಈ ಕಛೇರಿಯ ಸಮಸಂಖ್ಯೆಯ ಪತ್ರದ ದಿನಾಂಕ:12.06.2007.

3) ಈ ಕಛೇರಿಯ ಸಮಸಂಖ್ಯೆಯ ಪತ್ರದ ದಿನಾಂಕ:14.06.2007ರಲ್ಲಿ ಆರೋಪಪಟ್ಟಿ ಜಾರಿಮಾಡಿದೆ.

4) ಈ ಕಛೇರಿಯ ಸಮಸಂಖ್ಯೆಯ ಪತ್ರದ ದಿನಾಂಕ:20.09.2007.

5) ವಿಚಾರಣಾಧಿಕಾರಿಗಳ ವರದಿ ದಿನಾಂಕ:29.11.2008.

6) ಈ ಕಛೇರಿಯ 2ನೇ ಕಾರಣಕೇಳುವ ನೋಟಿಸ್ ದಿನಾಂಕ:29.11.2008.

**ಪ್ರಸ್ತಾವನೆ:**

ಶ್ರೀ ಡಿ. ಗಂಗಾಧರಯ್ಯ ಸಹಶಿಕ್ಷಕರು ಸರ್ಕಾರಿ ಹಿ.ಪ್ರಾ.ಶಾಲೆ ಹರಿದಾಸನಹಳ್ಳಿ ತುರುವೇಕೆರೆ ತಾಲ್ಲೂಕು ಇವರು ಈ ಹಿಂದೆ ಸರ್ಕಾರಿ ಹಿ.ಪ್ರಾ.ಶಾಲೆ ತಗ್ಗೀಹಳ್ಳಿ ಗುಬ್ಬಿ ತಾಲ್ಲೂಕು ಈ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಕರ್ತವ್ಯಲೋಪಗಳ ಹಿನ್ನೆಲೆಯಲ್ಲಿ ಉಲ್ಲೇಖ (1)ರಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಟ್ಟು ನಂತರ ಇಲಾಖೆ ವಿಚಾರಣೆ ಕಾಯ್ದಿರಿಸಿ ಉಲ್ಲೇಖ (2)ರಲ್ಲಿ ಸೇವೆಯಲ್ಲಿ ಪುನರ್‌ಸ್ಥಾಪಿಸಲಾಗಿತ್ತು. ಇವರ ಮೇಲೆ ಇರುವ ಆರೋಪಗಳ ಬಗ್ಗೆ ಸಿಸಿಎ ನಿಯಮದಡಿ ವಿಚಾರಣೆ ಮಾಡಲು ಆರೋಪಪಟ್ಟಿಯನ್ನುಉಲ್ಲೇಖ (3)ರಲ್ಲಿ ಶಿಕ್ಷಕರಿಗೆ ಜಾರಿ ಮಾಡಿ ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು. ಆರೋಪಿ ಶಿಕ್ಷಕರು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲಾ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಉಲ್ಲೇಖ (4)ರಲ್ಲಿ ಶ್ರೀ ರಂಗಧಾಮಯ್ಯ ಕ್ಷೇತ್ರಶಿಕ್ಷಣಾಧಿಕಾರಿಗಳು ತಿಪಟೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಿ ಸಿಸಿಎ ನಿಯಮ 11ರಡಿಯಲ್ಲಿ ವಿಚಾರಣೆ ನಡೆಸಿ ವರದಿಯನ್ನು ನೀಡುವಂತೆ ತಿಳಿಸಲಾಗಿತ್ತು.

**ಆರೋಪ:**

ಸರ್ಕಾರಿ ಹಿ.ಪ್ರಾ.ಶಾಲೆ ತಗ್ಗಿಹಳ್ಳಿ ಗುಬ್ಬಿ ತಾಲ್ಲೂಕು ಈ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ:24.08.2006 ರಿಂದ ದಿನಾಂಕ:19.09.2006 ರವರೆಗೆ ಮತ್ತು ದಿನಾಂಕ:11.06.2006, ದಿನಾಂಕ:18.10.2006 ದಿನಾಂಕ:19.10.2006 ಹಾಗೂ ದಿನಾಂಕ:25.10.2006 ರಿಂದ ದಿನಾಂಕ:12.01.2007ರವರೆಗೆ ಶಾಲಾ ಕೆಲಸಕ್ಕೆ ಅನಧಿಕೃತ ಗೈರುಹಾಜರಿ ಆಗಿ ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿಗೆ ದಕ್ಕೆ ಉಂಟು ಮಾಡಿ ಕರ್ತವ್ಯಲೋಪ ಎಸಗಿರುವುದು.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆ ನಡೆಸಿ ಸಮಗ್ರ ವರದಿಯನ್ನು ಉಲ್ಲೇಖ (5)ರಲ್ಲಿ ನೀಡುತ್ತಾ ಸಾಕ್ಷಿದಾರರ ಮತ್ತು ದಾಖಲಾತಿಗಳು ಹಾಗೂ ಶಿಕ್ಷಕರು ವಿಚಾರಣೆ ಸಮಯದಲ್ಲಿ ಸ್ವತಃ ಆರೋಪವನ್ನು ಒಪ್ಪಿರುವುದರಿಂದ ಆರೋಪ ಸಾಬೀತಾಗಿದೆ ಎಂದು ವರದಿ ನೀಡಿರುತ್ತಾರೆ.

ಸದರಿ ವಿಚಾರಣಾ ವರದಿಯನ್ನು ಆರೋಪಿ ಶಿಕ್ಷಕರಿಗೆ ಜಾರಿಗೊಳಿಸಿ ಲಿಖಿತ ಹೇಳಿಕೆ ನೀಡಲು ಉಲ್ಲೇಖ (6)ರಲ್ಲಿ ತಿಳಿಸಲಾಗಿತ್ತು. ಆದರೆ ಶಿಕ್ಷಕರು ರಕ್ಷಣಾ ಹೇಳಿಕೆ ಸಲ್ಲಿಸಿರುವುದಿಲ್ಲ ವಿಚಾರಣಾ ವೇಳೆಯಲ್ಲಿ ಯಾವುದೇ ಸಮಂಜಸ ದಾಖಲೆಗಳನ್ನು ನೀಡದೆ ಸ್ವತಃ ಆರೋಪ ಶಿಕ್ಷಕರು ಶಾಲೆಗೆ ಅನಧಿಕೃತ ಗೈರುಹಾಜರಿ ಆಗಿರುವುದನ್ನು ಒಪ್ಪಿರುವ ಆರೋಪ ವಿಚಾರಣೆಯಲ್ಲಿ ಆರೋಪ ಸಾಬೀತಾಗಿರುವ ವರದಿಯನ್ನು ಒಪ್ಪಿದೆ.

ಮುಂದುವರಿದು ಈ ಶಿಕ್ಷಕರು ಇವರ ಸೇವಾ ಅವಧಿಯಲ್ಲಿ ದಿನಾಂಕ:22.05.1997 ರಿಂದ ದಿನಾಂಕ:23.11.2005ರವರೆಗೆ ಕೆಳಕಂಡಂತೆ ಗೈರುಹಾಜರಾಗಿರುತ್ತಾರೆ.

| | | |
|---|---|---|
| 1. | ದಿನಾಂಕ:22.05.1997 ರಿಂದ 10.06.1997ರವರೆಗೆ | 20 ದಿನಗಳು |
| 2. | ದಿನಾಂಕ:20.09.2000 ರಿಂದ 07.11.2000ರವರೆಗೆ | 49 ದಿನಗಳು |
| 3. | ದಿನಾಂಕ:05.12.2000 ರಿಂದ 18.12.2000ರವರೆಗೆ | 14 ದಿನಗಳು |
| 4. | ದಿನಾಂಕ:10.03.2001 ರಿಂದ 31.08.2001ರವರೆಗೆ | 175 ದಿನಗಳು |
| 5. | ದಿನಾಂಕ:01.09.2001 ರಿಂದ 31.11.2001ರವರೆಗೆ | 91 ದಿನಗಳು |
| 6. | ದಿನಾಂಕ:01.12.2001 ರಿಂದ 25.02.2002ರವರೆಗೆ | 87 ದಿನಗಳು |
| 7. | ದಿನಾಂಕ:02.11.2002 ರಿಂದ 17.06.2003 ರವರೆಗೆ | 228 ದಿನಗಳು |
| 8. | ದಿನಾಂಕ:15.12.2003 ರಿಂದ 30.06.2004ರವರೆಗೆ | 209 ದಿನಗಳು |
| 9. | ದಿನಾಂಕ:17.08.2005 ರಿಂದ 23.11.2005ರವರೆಗೆ | 99 ದಿನಗಳು |
| | **ಒಟ್ಟು** | **906 ದಿನಗಳು** |

ಮೇಲ್ಕಂಡಂತೆ ಶಾಲಾ ಕೆಲಸಕ್ಕೆ ಅನಧಿಕೃತ ಗೈರುಹಾಜರಿ ಆಗಿದ್ದು ಈ ಅವಧಿಗೆ ವೇತನ ರಹಿತ ರಜೆ ಮಂಜೂರು ಮಾಡಿ ಇತ್ಯರ್ಥ ಪಡಿಸಿರುವುದು. ದಿನಾಂಕ:24.01.2007ರಂದು ಕ್ಷೇತ್ರ ಶಿಕ್ಷಣಾಧಿಕಾರಿಗಳು ಗುಬ್ಬಿ ಇವರ ವರದಿಯಿಂದ ಕಂಡುಬಂದಿರುತ್ತದೆ.

ಒಬ್ಬ ಶಿಕ್ಷಕರಾಗಿ ಮುಖ್ಯವಾಗಿ ಶಿಸ್ತು ಪಾಲನೆಯು ಅಗತ್ಯವಾಗಿರುತ್ತದೆ ಹಾಗೂ ಮಕ್ಕಳ ಕಲಿಕೆಯ ಬಗ್ಗೆ ಹೆಚ್ಚು ಒತ್ತು ಕೊಡುವುದು ಶಿಕ್ಷಕರ ಕರ್ತವ್ಯ ಆಗಿರುತ್ತದೆ. ಆದರೆ ಈ ಶಿಕ್ಷಕರು ಇವರ ಸೇವಾ ಅವಧಿಯಲ್ಲಿ ಸಕಾರಣ ಇಲ್ಲದೆ ಪದೇಪದೇ ದೀರ್ಘಕಾಲ ಶಾಲಾ ಕೆಲಸಕ್ಕೆ ಗೈರುಹಾಜರಿ ಮಕ್ಕಳ ಶೈಕ್ಷಣಿಕ ಪ್ರಗತಿಗೆ ದಕ್ಕೆ ಉಂಟು ಮಾಡಿರುವುದು ಒಬ್ಬ ಉತ್ತಮ ಶಿಕ್ಷಕರ ನಡವಳಿಕೆಗಳಿಗೆ ವಿರುದ್ಧವಾಗಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಶ್ರೀ ಗಂಗಾಧರಯ್ಯ ಡಿ. ಸಹಶಿಕ್ಷಕರು ಸರ್ಕಾರಿ ಹಿ.ಪ್ರಾ. ಶಾಲೆ ಹರಿದಾಸನಹಳ್ಳಿ, ತುರುವೇಕೆರೆ ತಾಲ್ಲೂಕು ಇವರು ಈ ಹಿಂದೆ ಸರ್ಕಾರಿ ಹಿ.ಪ್ರಾ.ಶಾಲೆ ತಗ್ಗೀಹಳ್ಳಿ ಗುಬ್ಬಿ ತಾಲ್ಲೂಕು ಈ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಶಾಲಾ ಕೆಲಸಕ್ಕೆ ಅನಧಿಕೃತ ಗೈರುಹಾಜರಾಗಿ ಮಕ್ಕಳ ಶೈಕ್ಷಣಿಕ ಪ್ರಗತಿಗೆ ದಕ್ಕೆ ಉಂಟುಮಾಡಿರುವುದು ವಿಚಾರಣೆಯಲ್ಲಿ ಆಪಾದನೆಗಳು ಸಾಬೀತಾಗಿರುವುದರಿಂದ ಹಾಗೂ ಇದಕ್ಕೂ ಮುಂಚಿತವಾಗಿ ಅಂದರೆ 1997 ರಿಂದ 2005ನೇ ಸಾಲಿನವರೆಗೆ ಪದೇ ಪದೇ ಶಾಲಾ ಕೆಲಸಕ್ಕೆ ಅನಧಿಕೃತ ಗೈರುಹಾಜರಾಗಿ ಮಕ್ಕಳ ಶೈಕ್ಷಣಿಕ ಪ್ರಗತಿ ದಕ್ಕೆ ಉಂಟು ಮಾಡಿ ಶಿಕ್ಷಕರಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡಿರುವುದರಿಂದ ಶ್ರೀ ಬಿ.ಎ. ರಾಜಶೇಖರ ಉಪನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು ಸಾ.ಶಿ. ಇಲಾಖೆ, ತುಮಕೂರು (ದ) ಆದ ನಾನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮ 8(viii)ರ ಪ್ರಕಾರ ಶ್ರೀ ಡಿ. ಗಂಗಾಧರಯ್ಯ ಇವರನ್ನು ಸೇವೆಯಿಂದ ವಜಾಮಾಡಿ ಆದೇಶಿಸಿರುತ್ತೇನೆ.

ಕ್ಷೇತ್ರ ಶಿಕ್ಷಣಾಧಿಕಾರಿಗಳು ತುರುವೇಕೆರೆ ಇವರು ಈ ಆದೇಶವನ್ನು ನೌಕರರ ಸೇವಾವಹಿಯಲ್ಲಿ ನಮೂದಿಸಿ ಮೇಲಿನ ಆದೇಶದಂತೆ ನಿಯಮಾನುಸಾರ ಅಗತ್ಯ ಕ್ರಮಕೈಗೊಳ್ಳಲು ತಿಳಿಸಿದೆ.

**ಬಿ.ಎ. ರಾಜಶೇಖರ**

ಪಿ.ಆರ್.113

ಉಪನಿರ್ದೇಶಕರು ಹಾಗೂ ಶಿಸ್ತುಪ್ರಾಧಿಕಾರಿಗಳು,
ಸಾರ್ವಜನಿಕ ಶಿಕ್ಷಣ ಇಲಾಖೆ, ತುಮಕೂರು (ದ).

**ಜಿಲ್ಲಾ ಪಂಚಾಯತ್, ತುಮಕೂರು**

**ಸಾರ್ವಜನಿಕ ಶಿಕ್ಷಣ ಇಲಾಖೆ, ಉಪನಿರ್ದೇಶಕರ ಕಛೇರಿ, ತುಮಕೂರು (ದ) ಜಿಲ್ಲೆ**

**ಜ್ಞಾಪನಾ**

**ಸಂಖ್ಯೆ: ಇ5/ಅ.ಗೈ.ಹಾ.ದೂರು–107/05–06/6899, ದಿನಾಂಕ:20ನೇ ಜನವರಿ, 2009**

**ವಿಷಯ:** ಶ್ರೀ ಕೆ.ಎನ್. ಭದ್ರಯ್ಯ ಮುಖ್ಯ ಶಿಕ್ಷಕರು, ಸರ್ಕಾರಿ ಹಿ.ಪ್ರಾ.ಶಾಲೆ ಭುವನಹಳ್ಳಿ, ತುರುವೇಕೆರೆ ತಾಲ್ಲೂಕು. ಇವರು ಈ ಹಿಂದೆ ಸರ್ಕಾರಿ ಹಿ.ಪ್ರಾ.ಶಾಲೆ. ಹಂಡನಹಳ್ಳಿ ಗುಬ್ಬಿ ತಾಲ್ಲೂಕು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಆರೋಪಗಳ ಬಗ್ಗೆ ಶಿಸ್ತುಕ್ರಮ ಜರುಗಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಜ್ಞಾಪನ ಸಂಖ್ಯೆ: ಇ5/ದೂರು 25/04–05 ದಿನಾಂಕ:29.07.2005.
2) ಈ ಕಛೇರಿಯ ಜ್ಞಾಪನ ಸಂಖ್ಯೆ: ಇ5/ಅ.ಗೈ.ಹಾ107/05–06, ದಿನಾಂಕ:20.01.2006.
3) ಈ ಕಛೇರಿಯ ಸಮಸಂಖ್ಯೆಯ ಪತ್ರದ ದಿನಾಂಕ:04.05.2007ರಲ್ಲಿ ಆರೋಪಪಟ್ಟಿ ಜಾರಿಮಾಡಿದೆ.
4) ಈ ಕಛೇರಿಯ ಸಮಸಂಖ್ಯೆಯ ಪತ್ರದ ದಿನಾಂಕ:22.10.2007ರಲ್ಲಿ ವಿಚಾರಣಾಧಿಕಾರಿಗಳ ನೇಮಕ.
5) ವಿಚಾರಣಾಧಿಕಾರಿಗಳ ವರದಿ ದಿನಾಂಕ:22.09.2008.
6) ಈ ಕಛೇರಿಯ 2ನೇ ಕಾರಣಕೇಳುವ ನೋಟಿಸ್ ದಿನಾಂಕ:13.10.2008.

**ಪ್ರಸ್ತಾವನೆ:**

ಶ್ರೀ ಕೆ.ಎನ್. ಭದ್ರಯ್ಯ, ಮುಖ್ಯಶಿಕ್ಷಕರು, ಸರ್ಕಾರಿ ಹಿ.ಪ್ರಾ.ಶಾಲೆ ಭುವನಹಳ್ಳಿ ತುರುವೇಕೆರೆ ತಾಲ್ಲೂಕು ಇವರು ಈ ಹಿಂದೆ ಸರ್ಕಾರಿ ಹಿ.ಪ್ರಾ.ಶಾಲೆ ಹಂಡನಹಳ್ಳಿ ಗುಬ್ಬಿ ತಾಲ್ಲೂಕು ಈ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಿ ಆಗಿ ಶೈಕ್ಷಣಿಕ ಪ್ರಗತಿಗೆ ದಕ್ಕೆ ಉಂಟು ಮಾಡಿರುವ ಆರೋಪಗಳ ಹಿನ್ನೆಲೆಯಲ್ಲಿ ಉಲ್ಲೇಖ (1)ರಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಟ್ಟು ನಂತರ ಇಲಾಖೆ ವಿಚಾರಣೆ ಕಾಯ್ದಿರಿಸಿ ಉಲ್ಲೇಖ (2)ರಲ್ಲಿ ಸೇವೆಯಲ್ಲಿ ಪುನರ್‌ಸ್ಥಾಪಿಸಲಾಗಿತ್ತು. ಇವರ ಮೇಲೆ ಇರುವ ಆರೋಪಗಳ ಬಗ್ಗೆ ಸಿಸಿಎ ನಿಯಮದಡಿ ವಿಚಾರಣೆ ಮಾಡಲು ಉಲ್ಲೇಖ (3)ರಲ್ಲಿ ಆರೋಪಪಟ್ಟಿಯನ್ನು ಶಿಕ್ಷಕರಿಗೆ ಜಾರಿ ಮಾಡಿ ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು. ಆರೋಪಿ ಶಿಕ್ಷಕರು ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲಾ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಉಲ್ಲೇಖ (4) ರಲ್ಲಿ ಶ್ರೀ

